# ಪರಮ ರಹಸ್ಯ

ಸಂಪಾದಕರು
ಡಾ. ಸಿ. ಶಿವಕುಮಾರಸ್ವಾಮಿ ಹಾಗೂ
ಜಿ. ಎ. ಶಿವಲಿಂಗಯ್ಯ, ಮೈಸೂರು




**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**
ಕಲಾಗ್ರಾಮ, ಜ್ಞಾನಭಾರತಿ ಅಂಚೆ,
ಮಲ್ಲತ್ತಹಳ್ಳಿ, ಬೆಂಗಳೂರು – ೫೬೦ ೫೬

**PARAMA RAHASYA:** Edited by Sri. G. A. Shivalingaiah, Mysore and Dr. C. Shivakumara Swamy, Prof of Sanskrit & Principal (Retd), Basaveshwara College, Bangalore-560010 & Published by Ishwar K. Mirji, Registrar, Kuvempu Bhasha Bharathi Pradhikara, Kalagrama, Jnana Bharathi, Behind Bangalore University Campus, Mallattahalli, Bangalore-560 056.

| | | |
|---|---|---|
| First Edition | : | 2003 |
| Second Edition | : | 2022 |
| Page | : | xii + 52 = 64 |
| Price | : | Rs. 40/- |



| | | |
|---|---|---|
| ಪ್ರಥಮ ಮುದ್ರಣ | : | ೨೦೦೩ |
| ದ್ವಿತೀಯ ಮುದ್ರಣ | : | ೨೦೨೨ |
| ಪುಟಗಳು | : | xii + ೫೨ |
| ಬೆಲೆ | : | ರೂ. ೪೦/- |
| ಪ್ರತಿಗಳು | : | ೫೦೦ |

**ಪ್ರಕಾಶಕರು**
**ಶ್ರೀ ಈಶ್ವರ್ ಕು. ಮಿರ್ಜಿ**
ರಿಜಿಸ್ಟ್ರಾರ್
ಕುವೆಂಪು ಭಾಷಾ ಭಾರತಿ ಪ್ರಾಧಿಕಾರ
ಕಲಾಗ್ರಾಮ, ಜ್ಞಾನಭಾರತಿ ಅಂಚೆ
ಮಲ್ಲತ್ತಹಳ್ಳಿ, ಬೆಂಗಳೂರು-೫೬೦ ೦೫೬

ISBN No. :





| | |
|---|---|
| Title | : **Parama Rahasya** |
| Authors Name | : |
| Translator Name | : |
| Published By | : Ishwar K. Mirji, Registrar Kuvempu Bhashabharathi Pradhikara |
| Publisher’s Address | : Kuvempu Bhashabharathi Pradhikara Kalagrama Mallathahalli Bengaluru-560056 |
| Printer’s Details | : Abhimani Publications Ltd. Bengaluru |
| Edition Details | : 2nd Edition |
| ISBN | : |
| Copyright @ | : Kuvempu Bhashabharathi Pradhikara |

***ಮುಖಪುಟ ವಿನ್ಯಾಸ ಹಾಗೂ ಮುದ್ರಕರು***
**ಅಭಿಮಾನಿ ಪಬ್ಲಿಕೇಷನ್ಸ್ ಲಿಮಿಟೆಡ್,**
ನಂ. ೨/೪, ಡಾ. ರಾಜ್‌ಕುಮಾರ್ ರಸ್ತೆ ರಾಜಾಜಿನಗರ,
ಬೆಂಗಳೂರು – ೫೬೦೦೧೦, ದೂ : ೦೮೦-೨೩೧೩೨೯೮೦

# ಅಧ್ಯಕ್ಷರ ಮಾತು

'ಜ್ಞಾನ ಮತ್ತು ಸಾಹಿತ್ಯದ ನಿರಂತರ ಕೊಡುಕೊಳ್ಳುವಿಕೆಯ ಮೂಲಕ ಕನ್ನಡ ಸಂಸ್ಕೃತಿಯ ಸಂವರ್ಧನೆ' ಎಂಬುದು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಧ್ಯೇಯವಾಕ್ಯವಾಗಿದೆ. ಈ ಕೊಡುಕೊಳ್ಳುವಿಕೆಯು ವ್ಯಕ್ತಿ, ಸಂಸ್ಥೆ, ಭಾಷೆ ಇವೆಲ್ಲ ಘಟಕಗಳ ನಡುವೆ ಪರಸ್ಪರ ನಡೆಯಬೇಕಾಗುತ್ತದೆ. ಹೀಗಾಗಿ ಕನ್ನಡದಲ್ಲಿ ಹುಟ್ಟಿರುವ ಜ್ಞಾನ ಮತ್ತು ಸಾಹಿತ್ಯವನ್ನು ಸಾಧ್ಯವಾದಷ್ಟು ಹೆಚ್ಚು ಕನ್ನಡಿಗರಿಗೆ ಮತ್ತು ಕನ್ನಡೇತರರಿಗೆ ತಲುಪಿಸಬೇಕಾಗಿದೆ. ಅದೇ ರೀತಿ ಹೊರಗಿನ ಜ್ಞಾನ ಮತ್ತು ಸಾಹಿತ್ಯವು ಕನ್ನಡಿಗರಿಗೆ ಸುಲಭವಾಗಿ ಸಿಗುವಂತೆ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಪ್ರಾಧಿಕಾರವು ಕಾರ್ಯೋನ್ಮುಖವಾಗಿದೆ.

ಭಾರತೀಯ ಪರಂಪರೆಯಲ್ಲಿ ವೀರಶೈವ ದರ್ಶನಕ್ಕೆ ವಿಶೇಷ ಸ್ಥಾನವಿದೆ. ಈ ಬಗೆಗಿನ ಸಾಕಷ್ಟು ಗ್ರಂಥಗಳು ವಿವಿಧ ಮಠಗಳ ಆಶ್ರಯದಿಂದಾಗಿ ಹಾಗೂ ವಿವಿಧ ವಿದ್ವಾಂಸರ ವೈಯಕ್ತಿಕ ಆಸಕ್ತಿಯ ಕಾರಣದಿಂದಾಗಿ ಸಂಸ್ಕೃತದಿಂದ ಭಾಷಾಂತರಗೊಂಡು ಕನ್ನಡಕ್ಕೆ ಬಂದಿವೆ. ಹಲವು ವರ್ಷಗಳ ಹಿಂದೆಯೇ ಅಂತಹ ಅನೇಕ ಗ್ರಂಥಗಳ ಪ್ರತಿಗಳು ಖಾಲಿಯಾಗಿದ್ದು ಈ ಗ್ರಂಥಗಳ ಕನ್ನಡ ಅನುವಾದಿತ ಕೃತಿಗಳು ಸುಲಭವಾಗಿ ಕನ್ನಡಿಗರಿಗೆ ಒದಗುವಂತೆ ಮಾಡಬೇಕು ಎನ್ನುವ ಉದ್ದೇಶದಿಂದ ಕೆಲವು ಗ್ರಂಥಗಳನ್ನು ಮರುಮುದ್ರಿಸಿ ಪ್ರಕಟಿಸಲು ಪ್ರಾಧಿಕಾರವು ನಿರ್ಣಯಿಸಿತು.

ಪರಮ ರಹಸ್ಯ ಎಂಬ ಸಂಸ್ಕೃತ ಕೃತಿಯು ವೀರಶೈವ ಷಟ್ಸ್ಥಲ ದರ್ಶನದ ಬಗ್ಗೆ ಇದ್ದು, ಇದರ ಕನ್ನಡ ಭಾಷಾಂತರವನ್ನು ಡಾ. ಸಿ. ಶಿವಕುಮಾರ ಸ್ವಾಮಿ ಹಾಗೂ ಶ್ರೀಮಾನ್ ಜಿ.ಎ. ಶಿವಲಿಂಗಯ್ಯ ಅವರು ಪರಿಷ್ಕರಿಸಿ ಸಂಪಾದಿಸಿಕೊಟ್ಟಿದ್ದಾರೆ. ಅಲ್ಲದೆ, ಸಂಪಾದಕ ಸಮಿತಿಯಲ್ಲಿರುವ ಡಾ. ಡಂಕಿನ್ ಜಳಕಿ ಹಾಗೂ ಎಂ.ಎಸ್. ಚೈತ್ರ ಅವರ ಕೆಲಸವೂ ಶ್ಲಾಘನೀಯವಾಗಿದೆ.

ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ವತಿಯಿಂದ ಈ ಕೃತಿಯನ್ನು ಪ್ರಕಟಿಸಲು ತುಂಬು ಮನಸ್ಸಿನಿಂದ ಸಹಕರಿಸಿದ ಪ್ರಾಧಿಕಾರದ ಸದಸ್ಯರಿಗೆ, ಪ್ರಾಧಿಕಾರದ ಕೆಲಸಗಳಲ್ಲಿ ಶ್ರದ್ಧೆಯಿಂದ ತೊಡಗಿಸಿಕೊಂಡಿರುವ ರಿಜಿಸ್ಟ್ರಾರ್ ಶ್ರೀ ಈಶ್ವರ್ ಕು ಮಿರ್ಜಿ ಅವರಿಗೆ, ಪ್ರಾಧಿಕಾರದ ಸಿಬ್ಬಂದಿ ವರ್ಗದವರಿಗೆ, ಅಂದವಾಗಿ ಮುದ್ರಿಸಿರುವ ಮುದ್ರಣಾಲಯದ ಮಾಲಿಕರಿಗೆ ಹಾಗೂ ಅಲ್ಲಿಯ ಎಲ್ಲಾ ಸಿಬ್ಬಂದಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಡಾ. ಅಜಕ್ಕಳ ಗಿರೀಶ ಭಟ್**
ಅಧ್ಯಕ್ಷರು

# ಸಂಪಾದಕರ ನುಡಿ

'ಪರಮರಹಸ್ಯ'ವೆಂಬುದು ಸುಮಾರು ಹನ್ನೊಂದು ಸಾವಿರ ಗ್ರಂಥ ಬಾಹುವುಳ್ಳ ಸವಿಸ್ತಾರವಾದ ವಿಷಯವುಳ್ಳ ಕೃತಿ ಎಂಬುದು ತಿಳಿದುಬಂದಿದೆ. ಇದರಲ್ಲಿ ಅಷ್ಟಾವರಣ, ಅಂಗಷಟ್‌ಸ್ಥಲ, ಲಿಂಗಷಟ್‌ಸ್ಥಲ, ದೀಕ್ಷಾವಿಧಾನ ಇತ್ಯಾದಿ ವಿಷಯಗಳ ಸಂಪೂರ್ಣ ದರ್ಶನ ಇರಬಹುದು ಎನ್ನಿಸುತ್ತದೆ. ಸದ್ಯದಲ್ಲಿ ಈ ದೊಡ್ಡ ಕೃತಿಯ ಸಂಗ್ರಹರೂಪವೇ ಅದೇ ಹೆಸರಿ (ಪರಮರಹಸ್ಯ)ನಿಂದ ಕೂಡಿದ ಈ ಕೃತಿ ನಿಮ್ಮ ಕೈಯಲ್ಲಿದೆ. ಈ ಕೃತಿಯ ಆರಂಭದಲ್ಲಿ "ಉಪದೇಶಸಂಗ್ರಹ" ಎಂದು ತಿಳಿಸಲಾಗಿದೆ. ಇದನ್ನು ವಿಚಾರ ಮಾಡಿದರೆ ಉಪದೇಶಕರು ಯಾರು ಎಂದರೆ ಸಾಕ್ಷಾತ್ ಪರಮೇಶ್ವರನೇ ಆಗಿರುತ್ತಾನೆ. ಉಪದೇಶಿತರು ಯಾರು ಎಂದರೆ ಸಾಕ್ಷಾತ್ ಪಾರ್ವತಿ ದೇವಿಯರೇ ಆಗಿರುತ್ತಾರೆ. ಪರಮೇಶ್ವರನು 'ಶಿವನ' ಸಂಕೇತವಾದರೆ ಪಾರ್ವತಿಯು 'ಭಕ್ತ'ನ ಸಂಕೇತವಾಗಿರುತ್ತಾಳೆ. ಇದನ್ನು ಗಮನಿಸಿದರೆ 'ಶರಣಸತಿ ಲಿಂಗಪತಿ' ಎಂಬ ಮಾತು ಇಲ್ಲಿ ಅನ್ವಯವಾಗಿರುವಂತೆ ಕಂಡುಬರುತ್ತದೆ. ಆಗಮಗಳು ಪರಮೇಶ್ವರನಿಂದ ಪಾರ್ವತಿಗೋ, ಇಲ್ಲವೇ ಷಣ್ಮುಖನಿಗೋ ತಿಳಿಸಿದಂತೆ ಇರುವುದರಿಂದ ಇವು 'ಅಪೌರುಷೇಯ'ಗಳೇ ಆಗಿವೆ. ಈ ಕೃತಿಯ ಅಂತ್ಯದಲ್ಲಿ "ಇತಿ ಉಮಾಮಹೇಶ್ವರಸಂವಾದೇ ಷಡುಸ್ಥಲನಿರ್ಣಯಂ ಪರಮರಹಸ್ಯಂ ಸಂಪೂರ್ಣಂ" ಎಂದು ತಿಳಿಸಲಾಗಿದೆ. ಇಲ್ಲಿ ನಾವು ಗಮನಿಸಬೇಕಾದುದು 'ಷಡುಸ್ಥಲನಿರ್ಣಯಂ" ಮತ್ತು "ಪರಮ ರಹಸ್ಯಂ" ಎಂಬ ಎರಡು ಮಾತುಗಳನ್ನು. ಷಟ್‌ಸ್ಥಲಸಿದ್ಧಾಂತವು ಅತ್ಯಂತ ಗಹನವಾದುದು ಹಾಗೂ ಶ್ರೇಷ್ಠವಾದುದು. ಇದನ್ನು ಸಾಮಾನ್ಯರು ಅರಿಯುವುದು ಸಾಧ್ಯವಿಲ್ಲ. ಭವಿಗಳಿಗೆ ಇದನ್ನು ಅರುಹಲೂಬಾರದು. ಗುರುವು ಶಿಷ್ಯನಿಗೆ ಬಹಳ ರಹಸ್ಯವಾಗಿ ಇದನ್ನು ಉಪದೇಶ ಮಾಡಬೇಕು. ಆದುದರಿಂದಲೇ ಇದು ಪರಮ ರಹಸ್ಯವೆಂಬ ಹೆಸರನ್ನು ಪಡೆದುಕೊಂಡಿರುವುದು ಸಾರ್ಥಕವಾಗಿದೆ. ಈ ಕೃತಿಯಲ್ಲಿ ಗುರು ಮಹಾತ್ಮೆಯನ್ನು ವಿವರವಾಗಿ ತಿಳಿಸಲಾಗಿದೆ. ಉಳಿದ ವಿಷಯಗಳು ನಿರೂಪಿಸಲ್ಪಟ್ಟಿದ್ದರೂ ಅವುಗಳಲ್ಲಿ ಒಂದು ಕ್ರಮವಿಲ್ಲದಿರುವುದು ಸಂಗ್ರಹಕಾರನ ಆತುರದ ಭಾವನೆಯಾಗಿರಬೇಕು. ಆದರೂ ಇದನ್ನು ಅಗತ್ಯವಾಗಿ ಅಧ್ಯಯನ ಮಾಡುವುದು ಅವಶ್ಯಕ. ಗಮನಾರ್ಹವಾದ ವಿಷಯಗಳು ಇಲ್ಲಿ ಸೇರುವೆಯಾಗಿವೆ.

ಹನ್ನೆರಡನೆ ಶತಮಾನದಲ್ಲಿ ಬಾಳಿದ ಪ್ರಸಿದ್ಧ ವಚನಕಾರರಲ್ಲಿ ಚನ್ನಬಸವಣ್ಣನವರು ಪರಮ ಜ್ಞಾನಿಗಳೂ, ಪ್ರಕಾಂಡ ವಿದ್ವಾಂಸರೂ ಅಹುದು. ಇವರನ್ನು "ಷಟ್‌ಸ್ಥಲ

ಚಕ್ರವರ್ತಿ” ಎಂದು ಶರಣರು ವಿಶೇಷವಾಗಿ ಕರೆದಿರುತ್ತಾರೆ. ಇವರು ತಮ್ಮ ವಚನಗಳಲ್ಲಿ ಕೆಲವು ಕಡೆ ವೀರಶೈವ ಸಿದ್ಧಾಂತವನ್ನು “ಶಿವಾದ್ವೈತ” ಎಂಬುದಾಗಿ ಕರೆದಿರುತ್ತಾರೆ. ಇವರ ಕಾಲಕ್ಕೆ ಆಗಲೇ ಶಂಕರಾಚಾರ್ಯರ ಅದ್ವೈತ ಸಿದ್ಧಾಂತವೂ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತವೂ ಪ್ರತಿಪಾದಿಸಲ್ಪಟ್ಟಿತ್ತು. ಈ ಎರಡು ಸಿದ್ಧಾಂತಗಳು ಸಿದ್ಧವಾಗುವುದಕ್ಕಿಂತ ಮೊದಲೇ ಶೈವಪುರಾಣಗಳಲ್ಲಿ ಮತ್ತು ಶೈವಾಗಮಗಳಲ್ಲಿ ಸ್ಪಷ್ಟವಾಗಿ ಶೈವ ಸಿದ್ಧಾಂತವು ಕಂಡುಬಂದಿತ್ತು. ಶೈವ ಪ್ರಭೇದಗಳನ್ನು ಆಗಮಗಳಲ್ಲಿ ಕಾಣಬಹುದು. ಆ ಪ್ರಭೇದಗಳಲ್ಲಿ ವೀರಶೈವವು ಒಂದಾಗಿರುವುದು ವಿದ್ವಾಂಸರಿಗೆ ತಿಳಿದ ವಿಷಯವಾಗಿದೆ.

ಶಂಕರ ರಾಮಾನುಜರಂತೆ ಹೊಸ ಮತವನ್ನು ಸ್ಥಾಪಿಸಿ ಅದರ ಸಿದ್ಧಾಂತವನ್ನು ಪ್ರತಿಪಾದಿಸಬೇಕಾದ ಪ್ರಮೇಯವು ಚನ್ನಬಸವಣ್ಣನವರಿಗೆ ಅಗತ್ಯವಿರಲಿಲ್ಲ. ಶೈವಾಗಮ ಶೈವ ಪುರಾಣಗಳಲ್ಲಿ ಇದ್ದುದನ್ನೇ ಸ್ಪಷ್ಟವಾಗಿ ನಿರ್ದೇಶಿಸಿ ‘ಶಿವಾದ್ವೈತ’ ಎಂದು ಅಷ್ಟನ್ನೇ ಹೇಳಿ ‘ವೀರಶೈವ’ ಮತವನ್ನು ಎತ್ತಿ ಹಿಡಿದರು. ಇಲ್ಲಿ ನಾವು ಲಕ್ಷಿಸಬೇಕಾದ ಅಂಶವೆಂದರೆ ಚನ್ನಬಸವಣ್ಣನವರ ಪ್ರಕಾರ “ಶಿವಾದ್ವೈತ”ವೆಂದರೆ “ಷಟ್‌ಸ್ಥಲ ಸಿದ್ಧಾಂತ”ವೇ ಹೊರತು ಬೇರೆ ಅಲ್ಲ. ಅದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಗಮನಿಸಿದ ವೀರಶೈವ ಪಂಡಿತರು ಈ ಷಟ್‌ಸ್ಥಲ ಸಿದ್ಧಾಂತವನ್ನು “ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ”ವೆಂದು ಘೋಷಿಸಿದರು. ಅದಕ್ಕೋಸ್ಕರ ಬ್ರಹ್ಮಸೂತ್ರಕ್ಕೆ ಈ ಸಿದ್ಧಾಂತನ್ವಯ ಭಾಷ್ಯವನ್ನೂ ಬರೆದರು . ಇಲ್ಲಿ ಶಿವನು ಶಕ್ತಿವಿಶಿಷ್ಟನಾಗಿದ್ದಾನೆ ಎಂಬುದು ಮುಖ್ಯವಾದ ಅಂಶವಾಗಿದೆ.

ತಾತ್ವಿಕವಾಗಿ ವಿಷಯದ ಕಡೆಗೆ ಗಮನ ಹರಿಸಿದರೆ, ಅಲ್ಲಿ ಇಹ ಮತ್ತು ಪರ ಎಂಬ ಎರಡು ಶಬ್ದಗಳು ಅಥವಾ ನುಡಿಗಳು ಅತಿ ಮುಖ್ಯವಾದವು. ಈ ಇಹ ಮತ್ತು ಪರಗಳು ತ್ರಿಮತಗಳ ಸಿದ್ಧಾಂತಗಳಲ್ಲಿಯೂ ಇದ್ದೇ ಇವೆ. ಅತಿಯಾಗಿ ತಾರ್ಕಿಕವಾಗಿ ತಿಣುಕಾಡದೆ ವಿಚಾರ ಮಾಡಿದರೆ, ಇಹದಿಂದ ಪರಕ್ಕೆ ಹೋಗಬೇಕಾದರೂ ಶಕ್ತಿಯು ಅಗತ್ಯ. ಇಲ್ಲವೆ ಪರದಿಂದ ಇಹಕ್ಕೆ ಬರಬೇಕಾದರೂ ಶಕ್ತಿ ಅಗತ್ಯ. ಜಗತ್ತಿನಲ್ಲಿ ಶಕ್ತಿ ಇಲ್ಲದಿದ್ದರೆ ಏನೂ ಸಾಧ್ಯವಿಲ್ಲ ಎಂಬುದು ಸರ್ವವಿದಿತ. ಆದ್ದರಿಂದ ಯಾವುದೇ ಮತವಾದರೂ ಅದರಲ್ಲಿ ಶಕ್ತಿ ಅಂತರ್ಗತವಾಗಲೇಬೇಕು. ಆದರೂ ಅದನ್ನು ಗೌಣವಾಗಿಟ್ಟುಕೊಂಡು ಮತತ್ರಯಗಳು ಪ್ರಚಲಿತವಾಗಿವೆ. ಸೃಷ್ಟಿಕಾರ್ಯಕ್ಕೂ, ಲಯಕಾರ್ಯಕ್ಕೂ ಶಕ್ತಿಯು ಅಗತ್ಯವಾಗಿರುವಾಗ ಇದನ್ನು ಒತ್ತಿ ಹೇಳಬೇಕಾದ ಅವಶ್ಯಕತೆ ಇಲ್ಲ. ಆದ್ದರಿಂದ ಈ ಮತಗಳೆರಡನ್ನೂ ಅರಿತಿದ್ದ ಚನ್ನಬಸವಣ್ಣನವರು ಒಂದು ಹೊಸ ಮತ (ಸಿದ್ಧಾಂತ)ವನ್ನು ಸ್ಥಾಪಿಸದೆ, ಪೂರ್ವದಲ್ಲೇ ಸಿದ್ಧವಾಗಿದ್ದ ಮತವನ್ನು ‘ಶಿವಾದ್ವೈತ’ ಎಂದಷ್ಟೇ ಹೇಳಿ ಸುಮ್ಮನಾಗಿದ್ದಾರೆ. ಮತಾಚಾರ್ಯರಂತೆ ಪ್ರಸ್ಥಾನತ್ರಯಗಳಿಗೆ ಭಾಷ್ಯಗಳನ್ನು ಬರೆಯುವ ಗೋಜಿಗೆ ಹೋಗಲಿಲ್ಲ. ಅದು ಅವರಿಗೆ ಬೇಕಾಗಿಯೂ ಇರಲಿಲ್ಲ. “ಏಕಂ ಸತ್ ವಿಪ್ರಾ ಬಹುಧಾ ವದಂತಿ” ಎಂಬ ಆರ್ಷ ವಾಕ್ಯವೇ ಸಾಕಲ್ಲವೇ ಎಂಬುದು ಅವರ ಅಭಿಪ್ರಾಯವಾಗಿರಬೇಕು.

'ಪರಮ ರಹಸ್ಯ'ವೆಂಬ ಈ ಕೃತಿಯು ಸಂಸ್ಕೃತ ಭಾಷೆಯಲ್ಲಿದೆ. ಸಂಸ್ಕೃತವನ್ನು ಬಲ್ಲ ಶಿವಾನುಭಾವಿಯೋರ್ವನು ಇದು ಎಲ್ಲರಿಗೂ ಅರಿವಿಗೆ ಬರಲಿ ಎಂಬ ಸದುದ್ದೇಶದಿಂದ ಕನ್ನಡದಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ. ಇದನ್ನು ಶಿವಭಕ್ತರು ಅಧ್ಯಯನ ಮಾಡಿ ಮನನ ಮಾಡಿಕೊಂಡರೆ ಸಾರ್ಥಕತೆಯನ್ನು ಪಡೆದುಕೊಳ್ಳಬಹುದು. ಈ ಕೃತಿಯ ಕೊನೆಯ ಭಾಗದಲ್ಲಿ ಒಂದು ಶ್ಲೋಕವಿದೆ. ಅದು ಈ ರೀತಿ ಇದೆ.

ನಾಹಂ ವಸಾಮಿ ಕೈಲಾಸೇ ನ ಮೇರೌ ನ ಚ ಮಂದರೇ ।
ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ ॥

ಇದು ಶಿವನು ಹೇಳಿರುವ ಮಾತು. "ಎಲೈ ಪಾರ್ವತಿಯೇ ನಾನು ಕೈಲಾಸದಲ್ಲಿ ಇಲ್ಲ , ಮೇರು ಪರ್ವತದಲ್ಲಿ ಇಲ್ಲ ಅಥವಾ ಮಂದರಗಿರಿಯಲ್ಲಿಯೂ ಇಲ್ಲ . ಆದರೆ ಎಲ್ಲಿ ನನ್ನ ಭಕ್ತರುಗಳು ಇರುತ್ತಾರೋ ಅಲ್ಲಿಯೇ ನಾನು ಇರುತ್ತೇನೆ" ಎಂಬುದಾಗಿ. ಅಂದರೆ, ನಿಷ್ಠಾವಂತನಾದ ಭಕ್ತನ ಮಹಿಮೆ ಎಂತಹುದು ಎಂಬುದು ಶಿವನ ಮಾತಿನಿಂದ ವ್ಯಕ್ತವಾಗುತ್ತದೆ.

**–ಜಿ.ಎ.ಶಿವಲಿಂಗಯ್ಯ**

# ವಿಷಯಾನುಕ್ರಮಣಿಕೆ

**ಶುಭಾಶೀರ್ವಾದ ಸಂದೇಶ** **v**
**ಸಂಪಾದಕರ ನಿವೇದನೆ** **vi**
**ಕೃತಜ್ಞತೆಗಳು** **ix**
**ಲೇಖಕರ ಪರಿಚಯ** **x**

ಪರಮರಹಸ್ಯ ೧
ಅನುಬಂಧ ೫೦

# ಪರಮರಹಸ್ಯ

**ಉಪದೇಶ ಸಂಗ್ರಹಃ**

**ಕೈಲಾಸಶಿಖರೇ ರಮ್ಯೇ ಭಕ್ತಿಸಂಧಾನನಾಯಕಮ್ ।**
**ಪ್ರಣಮ್ಯ ಪಾರ್ವತೀ ಭಕ್ತ್ಯಾ ಶಂಕರಂ ಪರಿಪೃಚ್ಛತಿ ॥**

ಟೀಕು: ಅತ್ಯಂತ ರಮಣೀಯವಾಗಿರುತ್ತಂ ಇದ್ಧಂಥಾ ಕೈಲಾಸ ಪರ್ವತದಲ್ಲಿ ಭಕ್ತಿ ಸಂಧಾನಕ್ಕೆ ಒಡೆಯನಾಗುತ್ತಂ ಇದ್ಧಂತಾ ಪರಮೇಶ್ವರನನ್ನು ಪಾರ್ವತೀ ದೇವಿಯು ಭಕ್ತಿಯಿಂದ ನಮಸ್ಕಾರವಂ ಮಾಡಿ ಬಿಸಗೊಳುತ್ತಂ ಇದ್ದಳು. ॥೧॥

**ಶ್ರೀ ದೇವ್ಯೋವಾಚ: ಪಾರ್ವತಿ ದೇವಿಯು ನುಡಿದಳು**

**ಭಗವಾನ್ ಸರ್ವಧರ್ಮಜ್ಞ ವ್ರತಾನಾಂ ವ್ರತನಾಯಕಮ್ ।**
**ಬ್ರೂಹಿ ಮೇ ಕೃಪಯಾ ದೇವ ಗುರುಮಾಹಾತ್ಮ್ಯಮುತ್ತಮಮ್ ॥**

ಟೀಕು: ವ್ರತಗಳಿಗೊಡೆಯನಹಂತಾ, ಸರ್ವಧರ್ಮವನು ಬಲ್ಲಂಥಾ ಭಗವಾನನಹಂತಾ ಎಲೆ ದೇವನೆ ಉತ್ತಮಹಂತಾ ಗುರು ಮಹಾತ್ಮ್ಯವನು ಕೃಪೆಯಿಂದ ಎನಗೆ ಪೇಳು ಎಂದಳು. ॥೨॥

**ಈಶ್ವರ ಉವಾಚ: ಪರಮೇಶ್ವರನು ನುಡಿದನು**

**ಯೋ ಗುರುಶ್ಚ ಶಿವಃ ಪ್ರೋಕ್ತ್ಯಾ ಯಃ ಶಿವಃ ಸದ್ಗುರುಸ್ಮೃತಃ ।**
**ಭುಕ್ತಿಮುಕ್ತಿಪ್ರದಾತಾ ಚ ತಸ್ಮೈ ಶ್ರೀಗುರವೇ ನಮಃ ॥**

ಟೀಕು:ಅವನಾನೊಬ್ಬ ಶ್ರೀಗುರುವು ಆ ಪರಮೇಶ್ವರನೆಂದು ಹೇಳಲ್ಪಟ್ಟನು. ಅವನಾನೊಬ್ಬ ಪರಮೇಶ್ವರನು ಭುಕ್ತಿಮುಕ್ತಿಯ ಕೊಡುತ್ತಂ ಇದ್ದಂಥಾ ಆ ಗುರುವೆಂದೇ ಹೇಳಲ್ಪಟ್ಟನು. ಆ ಗುರುವಿಂಗೋಸ್ಕರ ನಮಸ್ಕಾರವು. ॥೩॥

**ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಮ್ ।**
**ನಾದಬಿಂದುಕಳಾತೀತಂ ತಸ್ಮೈ ಶ್ರೀಗುರವೇ ನಮಃ ॥**

ಟೀಕು:ಚೈತನ್ಯಾತ್ಮಕನಹಂತಾ ನಿತ್ಯನಹಂತಾ ಶಾಂತನಹಂತಾ ಆಕಾಶತತ್ತ್ವವನ್ನು ಮೀರಿದಂತಾ ನಿರಂಜನನಹಂತಾ ನಾದಬಿಂದು ಕಳೆಗಳನು ಮೀರಿದಂತಾ ಆ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೪॥

**ಸ್ಥಾವರಂ ಜಂಗಮಾಧಾರಂ ನಿರ್ಮಲಂ ಸ್ಥಿರಮೇವ ಚ ।**
**ಜಗದ್ವಂದಿತಪಾದಾಯ ತಸ್ಮೈ ಶ್ರೀಗುರವೇ ನಮಃ ॥**

ಟೀಕು : ಸ್ಥಾವರ ಜಂಗಮಾತ್ಮಕಂಗಳಿಗೆ ಆಧಾರನಾಹಂತಾ ನಿರ್ಮಲನಹಂತಾ ಲೋಕದಿಂದ ವಂದಿಸಿಕೊಳ್ಳಲ್ಪಟ್ಟ ಪಾದವನುಳ್ಳ ಶ್ರೀಗುರುವಿಂಗೋಸ್ಕರ ನಮಸ್ಕಾರವು. ॥೫॥

**ಸ್ಥಾವರಂ ನಿರ್ಮಲಂ ಶಾಂತಂ ಜಂಗಮಂ ಸ್ಥಿರಮೇವ ಚ ।**
**ವ್ಯಾಪ್ತಂಯೇನ ಜಗತ್ಸರ್ವಂ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಸ್ಥಾವರಾತ್ಮಕನಹಂತ ನಿರ್ಮಳನಹಂತ ಶಾಂತನಹಂತ ಜಂಗಮಾತ್ಮಕನಹಂತ ಸ್ಥಿರನಹಂತ ಅವನಾನೊಬ್ಬನಿಂದ ಸಮಸ್ತ ಜಗತ್ತು ವ್ಯಾಪಿಸಲ್ಪಟ್ಟಿತ್ತು. ಅಂತಹ ಶ್ರೀ ಗುರುವಿಗೋಸ್ಕರ ನಮಸ್ಕಾರವು. ॥೬॥

**ಜಾನಶಕ್ತಿಸಮಾರೂಢತತ್ತ್ವಮಾಲಾದಿ ಭೂಷಿತಃ ।**
**ಅಜ್ಞಾನಾಂಧತಮಸ್ಸೂರ್ಯ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಜ್ಞಾನಶಕ್ತಿಯನರಿದಂತಾ ಮೂವತ್ತಾರು ತತ್ತ್ವಗಳ ಮಾಲೆಗಳನ್ನೇ ಅಲಂಕಾರವಾಗಿ ಧರಿಸಿದಂತಾ. ಅಜ್ಞಾನವೆಂಬ ಕತ್ತಲೆಗೆ ಸೂರ್ಯನಹಂತಾ ಶ್ರೀ ಗುರುವಿದ್ದಾನು. ಅಂತಹ ಶ್ರೀ ಗುರುವಿಗೋಸ್ಕರ ನಮಸ್ಕಾರವು ॥೭॥

**ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಮ್ ।**
**ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಖಂಡಲನಲ್ಲದೇ ಇರ್ದ ಮಂಡಲಾಕಾರವನುಳ್ಳಂಥಾ ಚರಾಚರಾತ್ಮಕವಾದ ಆವುದಾನೊಂದು ವಸ್ತುವಿನಿಂದ ವ್ಯಾಪಿಸಲ್ಪಟ್ಟಿತ್ತು . ಅಂಥಾ ಪರತತ್ತ್ವವು ಆವನಾನೊಬ್ಬ ಶ್ರೀಗುರುರಾಯನಿಂದ ತೋರಿಸಲ್ಪಟ್ಟಿತು. ಅಂಥಾ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೮॥

**ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ ।**
**ಯೇತೇ ಗರ್ಭಗತಾಶ್ಚೈವ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಬ್ರಹ್ಮನೂ ವಿಷ್ಣುವೂ ರುದ್ರನೂ ಈಶ್ವರನೂ ಸದಾಶಿವನೂ ಇವರುಗಳು ಪರಬ್ರಹ್ಮದಲ್ಲಿಯೇ ಅಡಗಿದರು. ಅಂಥಾ ಮಹಿಮೆಯನ್ನುಳ್ಳ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೯॥

**ಗುರುದೇವೋ ಮಹಾದೇವೋ ಗುರುದೇವಃ ಸದಾಶಿವಃ ।**
**ಗುರುದೇವಃ ಪರಂತತ್ತ್ವಂ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಗುರುದೇವನೇ ಮಹಾದೇವನು, ಗುರುದೇವನೇ ಸದಾಶಿವನು. ಗುರುವೇ ಪರತತ್ತ್ವವು. ಅಂತಹ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೧೦॥

**ಅಜ್ಞಾನತಿಮಿರಾಂಧಶ್ಚ ಜ್ಞಾನಾಂಜನಶಲಾಕಯಾ ।**
**ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಅಜ್ಞಾನವೆಂಬ ಕತ್ತಲೆಯಿಂದ ಕಾಣಬಾರದೇ ಇದ್ದಂಥಾ ಕಣ್ಣು, ಜ್ಞಾನವೆಂಬ ಅಂಜನಶಲಾಕೆಯಿಂದ ಆವನಾನೊಬ್ಬ ಶ್ರೀಗುರುವಿನಿಂದ ಪ್ರಕಾಶಿಸಲ್ಪಟ್ಟಿತ್ತು. ಅಂಥಾ ಶ್ರೀ ಗುರುವಿಂಗೋಸ್ಕರ ನಮಸ್ಕಾರವು ॥೧೧॥

**ಭವಾರಣ್ಯ ಪ್ರವಿಷ್ಟಸ್ಯ ದಗ್ಧೋಹಂ ಭ್ರಾಂತಚೇತಸಃ ।**
**ಯೇನ ಮೇ ದರ್ಶಿತಂ ಪಂಥಾ ತಸ್ಮೈ ಶ್ರೀಗುರುವೇ ನಮಃ ॥**

ಟೀಕು: ಸಂಸಾರವೆಂಬ ಅರಣ್ಯದಲ್ಲಿ ಪ್ರವೇಶಿಸಿದಂತಾ, ಅಜ್ಞಾನದಲ್ಲಿ ಬೆಂದು ಸುಡುತ್ತಂ ಇದ್ದಂತ ಚಿತ್ತವನುಳ್ಳಯನಗೆ ಮಾರ್ಗವು ಆವನಾನೊಬ್ಬ ಗುರುವಿನಿಂದ ತೋರಿಸಲ್ಪಟ್ಟಿತ್ತು. ಅಂಥಾ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೧೨॥

**ಅನಂತಜನ್ಮಸಂಪ್ರಾಪ್ತಕರ್ಮೇಂಧನವಿದಾಹಿನೇ ।**
**ಜ್ಞಾನಾಗ್ನೀನಾಂ ಪ್ರಕಾಶಾಯ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಹಲವು ಜನ್ಮದಲ್ಲಿ ಒದಗಿಸಲ್ಪಟ್ಟ ಪಾಪಗಳೆಂಬ ಕಾಷ್ಟಂಗಳಂ ಸುಡುತ್ತಂ ಇದ್ದಂಥ, ಜ್ಞಾನಾಗ್ನಿಯ ಪ್ರಕಾಶನ ಮಾಡುತ್ತಂ ಇದ್ದಂಥ ಆ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೧೩॥

**ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನತೇಜಸಾ ।**
**ಗುರುಪಾದೋದಕಂ ಪೀತ್ವಾ ಸಂಸಾರದ್ರುಮನಾಶನಮ್ ॥**

ಟೀಕು: ಪಾಪವೆಂಬ ಕೆಸರನ್ನು ಒಣಗಿಸುತ್ತಂ ಇದ್ದಂಥಾ, ಜ್ಞಾನಾಗ್ನಿಯಿಂದ ಪ್ರಕಾಶಿಸುತ್ತಂ ಇದ್ದಂಥಾ ಗುರುಪಾದೋದಕವನು ಪಾನವ ಮಾಡಿದರೆ ಸಂಸಾರವೆಂಬ ವೃಕ್ಷವು ನಾಶವಹುದು. ॥೧೪॥

**ಪ್ರಣಮ್ಯದಂಡವದ್ಭೂಮ್ಯಾಂ ಇಷ್ಟಮಂತ್ರೈಸ್ಸಮರ್ಚಯೇತ್ ।**
**ಗುರೋಃ ಶ್ರೀಪಾದಪದ್ಮಂ ಚ ಗಂಧಪುಷ್ಪಾಕ್ಷತಾದಿಭಿಃ ॥**

ಟೀಕು: ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿ ಗುರುವಿನ ಶ್ರೀಪಾದ ಕಮಲವನು ಗಂಧ ಪುಷ್ಪಾಕ್ಷತೆ ಮೊದಲಾದಂತಾ ಅವರಿಂದುಪದೇಶಿಸಿದ ಮಂತ್ರದಿಂದ ಅರ್ಚನೆಯಂ ಮಾಡುವುದು. ॥೧೫॥

**ಅನ್ಯಥಾ ವಿತ್ತಹೀನೋಪಿ ಗುರವೇ ತತ್ಪರಾಯಣಃ ।**
**ಕೃತ್ವಾ ದಂಡನಮಸ್ಕಾರಂ ಸ್ವಶರೀರಂ ನಿವೇದಯೇತ್ ॥**

ಟೀಕು:ಹಾಗಲ್ಲದೇ ಇದ್ದರೆ ಧನವಿಲ್ಲದೆ ಇದ್ದಂತಾತನು ಗುರುವಿನಲ್ಲಿ ತಾತ್ಪರ್ಯ ಉಳ್ಳವನಾಗಿ ದಂಡನಮಸ್ಕಾರವಂ ಮಾಡಿ ತನ್ನ ಶರೀರವನ್ನೆ ಸಮರ್ಪಿಸುವುದು. ॥೧೬॥

**ಕರ್ಮಣಾ ಮನಸಾ ವಾಚಾ ಗುರವೇ ಭಕ್ತಿವತ್ಸಲಃ ।**
**ಶರೀರಂ ಪ್ರಾಣಮರ್ಥಂ ಚ ಸದ್ಗುರುಭ್ಯೋ ನಿವೇದಯೇತ್ ॥**

ಟೀಕು: ಕಾರ್ಯದಿಂದ ಮನಸ್ಸಿನಿಂದ ವಾಕ್ಯದಿಂದ ಗುರುವಿಂಗೆ ಭಕ್ತಿಯನುಳ್ಳಾತನಾಗಿ ಶರೀರವನು ಪ್ರಾಣವನು ಅರ್ಥವನು ಸದ್ಗುರುವಿಂಗೆ ಸಮರ್ಪಿಸೂದು. ॥೧೭॥

**ಗುರುರ್ಮಾತಾ ಗುರುಃ ಪಿತಾ ಗುರುರೇವ ಹಿ ಬಾಂಧವಾಃ ।**
**ಗುರುದೇವಾತ್ಪರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ಗುರುವೇ ತಾಯಿಯು ಗುರುವೇ ತಂದೆಯು ಬಂಧು-ಬಾಂಧವರುಗಳೂ ಗುರುವೇ ಆಗಿಹನು, ಗುರುವಿನಿಂದ ಪರತತ್ತ್ವವಹಂಥಾದಿಲ್ಲ. ಅಂತಹ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೧೮॥

**ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಧಿಕಂ ನ ಗುರೋರಕಂ ।**
**ವಿದಿತಂ ವಿದಿತಂ ವಿದಿತಂ ವಿದಿತಂ ಶಿವಶಾಸನತಃ ಶಿವಶಾಸನತಃ ॥**

ಟೀಕು: ಗುರುವಿಂದಧಿಕವಿಲ್ಲ ಅಧಿಕವಿಲ್ಲ, ಎಂಬುದಾಗಿ ಹೇಳಲ್ಪಟ್ಟಿತ್ತು ಹೇಳಲ್ಪಟ್ಟಿತ್ತು, ಎಲ್ಲಿ ಹೇಳಲ್ಪಟ್ಟಿತ್ತು ಎಂದರೆ ಶಿವಾಗಮದಲ್ಲಿ, ಶಿವಾಗಮದಲ್ಲಿ. ॥೧೯॥

**ಮನ್ನಾಥಸ್ತ್ರಿಜಗನ್ನಾಥಃ ಮದ್ಗುರುಸ್ತ್ರಿಜಗದ್ಗುರುಃ ।**
**ಸ್ವಾತ್ಮಾ ನಃ ಸರ್ವಭೂತಾತ್ಮ ತಸ್ಮೈ ಶ್ರೀಗುರವೇ ನಮಃ ॥**

ಟೀಕು: ನನ್ನ ವೊಡೆಯನು, ಮೂರು ಲೋಕಕ್ಕೊಡೆಯನು, ನನ್ನ ಗುರುವು ಮೂರು ಲೋಕಕ್ಕೆ ಗುರುವು. ಆ ಗುರುವಿನ ದೆಸೆಯಿಂದ ಸಮಸ್ತ ಪ್ರಾಣಿ ಸ್ವರೂಪವು ಆಯಿತು. ಅಂಥಾ ಶ್ರೀ ಗುರುವಿಂಗೋಸ್ಕರ ನಮಸ್ಕಾರವು. ॥೨೦॥

**ಧ್ಯಾನಮೂಲೋ ಗುರೋರ್ಮೂರ್ತಿಃ ಪೂಜಾಮೂಲೋ ಗುರೋಃ ಪದಮ್ ।**
**ಮಂತ್ರಮೂಲೋ ಗುರೋರ್ವಾಕ್ಯಂ ಮುಕ್ತಿಮೂಲೋ ಗುರೋಃ ಕೃಪಾ ॥**

ಟೀಕು: ಗುರುವಿನ ಮೂರ್ತಿ ಧ್ಯಾನಕ್ಕೆ ಮೂಲವು, ಗುರುವಿನ ಶ್ರೀಪಾದವು ಪೂಜೆಗೆ ಮೂಲವು, ಗುರುವಿನ ವಾಕ್ಯವು ಮಂತ್ರಕ್ಕೆ ಮೂಲವು, ಗುರುವಿನ ಕೃಪೆ ಮುಕ್ತಿಗೆ ಮೂಲವು. ॥೨೧॥

**ಅಂಗುಷ್ಠಾಗ್ರೇಹ್ಯಷ್ಟಷಷ್ಠಿತೀರ್ಥಾನ್ಯಪಿ ವಸಂತಿ ತೇ ।**
**ಸಪ್ತಸಾಗರಪಾದೋರ್ದ್ವೋ ತದೂರ್ಧ್ವಂ ಕುಲಪರ್ವತಾಃ ॥**

ಟೀಕು: ಶ್ರೀ ಗುರುವಿನ ಅಂಗುಷ್ಠದ ತುದಿಯಲ್ಲಿ ಅರವತ್ತೆಂಟು ತೀರ್ಥಂಗಳು ಇಹವು, ಸಪ್ತ ಸಮುದ್ರಂಗಳು ಮೇಲಾಲ್ಲಿ ಇಹವು, ಆಮೇಗಾಲಿನ ಇನ್ನೂ ಮೇಲೆ ಸಪ್ತಕುಲ ಪರ್ವತಂಗಳು ಇಹವು. ॥೨೨॥

**ನಕ್ಷತ್ರಗ್ರಹವೃಂದಾನಿ ಗುಲ್ಫೇ ತಸ್ಯ ವಸಂತಿ ತೇ ।**
**ಜಂಘಯೋರ್ವಸತೇರ್ನಿತ್ಯಂ ಷಟ್ತ್ರಿಂಶತ್ತ್ವರೂಪಿಣಮ್ ॥**

ಟೀಕು: ಆ ಗುರುವಿನ ಹರಡಿನಲ್ಲಿ ನಕ್ಷತ್ರಂಗಳೂ, ನವಗ್ರಹಂಗಳೂ ಇರುತ್ತಿಹವು. ಜಂಘಗಳಲ್ಲಿ ಮೂವತ್ತಾರು ತತ್ತ್ವ ಸ್ವರೂಪವು ಅನವರತವೂ ಇರುತ್ತಿಹವು. ॥೨೩॥

**ಸಪ್ತಸಾಗರಪರ್ಯಂತಂ ತೀರ್ಥಸ್ನಾನಫಲಂ ಯಥಾ ।**
**ಗುರೋರಂಘ್ರಿಜಲಂ ಬಿಂದುಸಹಸ್ರಾಂಶಂ ನ ಪೂರಯೇತ್ ॥**

ಟೀಕು: ಏಳು ಸಾಗರ ಪರಿಯಂತ ತೀರ್ಥಸ್ನಾನದ ಫಲವು ಗುರುವಿನ ಪಾದೋದಕದ ಬಿಂದುಗಳ ಸಾವಿರದೊಳಗಣ ಒಂದು ಅಂಶವನು ಯೆಯಿದಲರಿಯದು. ॥೨೪॥

**ಅಶರೀರಂ ಗುರೋರ್ಭಾವಮಾಕಾರೇ ಲಿಂಗಮೂರ್ತಿಕಮ್ ।**
**ಅನಂಗಸಂಗಸಂಯುಕ್ತಂ ಗುರುಲಿಂಗಂ ಸಮಾಶ್ರಿತಮ್ ॥**

ಟೀಕು: ಗುರುವಿನ ಭಾವವು ನಿರಾಕಾರವು, ಅದು ಲಿಂಗದ ಮೂರ್ತಿಯಾಕಾರವು, ಗುರುಲಿಂಗವು ನಿರಾಕಾರದ ಸಂಗವನುಳ್ಳದೆಂದರಿವುದು. ॥೨೫॥

**ಗುರುರೂಪಂ ತು ಯೋ ವಿದ್ವಾನ್ ಶಿವರೂಪಮಿತಿ ಸ್ಮರನ್ ।**
**ಅಶರೀರಾತ್ಮಸಂಬಂಧೋ ಗುರುಶಿಷ್ಯಮನುಗ್ರಹೇತ್ ॥**

ಟೀಕು: ಬಲ್ಲಂತಾತನು ಗುರುವಿನ ರೂಪವನ್ನು ಶಿವನ ರೂಪೆಂದೇ ಅರಿವುದು, ನಿರಾಕಾರಸ್ವರೂಪನಹಂತಾ ಗುರು ಶಿಷ್ಯನನ್ನು ಅನುಗ್ರಹಿಸಿದನು ಎಂದು ಭಾವಿಸೂದು. ॥೨೬॥

**ಯೋ ಗುರುಃ ಕಾಯರೂಪೇಣ ಗುರೋರ್ಭಾವಂ ನ ಭಾವಯೇತ್ ।**
**ಶಿಷ್ಯ ಜ್ಞಾನಪ್ರದೀಪೇನ ಅಪ್ರಮಾಣಮಗೋಚರಮ್ ॥**

ಟೀಕು: ಅಪ್ರಮಾಣವಹಂತಾ ಅಗೋಚರವಹಂತಾ ಗುರುವಿನ ರೂಪನ್ನು, ಆವನಾನೊಬ್ಬ ಶಿಷ್ಯನು ಜ್ಞಾನಪ್ರಕಾಶವು ತನಗೆ ಉಂಟಾದುದು ನಿಮಿತ್ತವಾಗಿ ಕಾಯರೂಪವೆಂದು ಭಾವಿಸಲಾಗದು. ॥೨೭॥

**ಏಕಮೂರ್ತಿತ್ರಯೋಭಾಗಂ ಗುರುರ್ಲಿಂಗಂ ತು ಜಂಗಮಮ್ ।**
**ಜಂಗಮಂ ಚ ಗುರೋರ್ಲಿಂಗಂ ತ್ರಿವಿಧಂ ಲಿಂಗಮುಚ್ಯತೇ ॥**

ಟೀಕು: ಒಂದು ಮೂರ್ತಿಯು ಗುರು ಲಿಂಗ ಜಂಗಮವೆಂದು ಮೂರು ಭಾಗವಾಯಿತ್ತು. ಜಂಗಮವು ಗುರುವು ಲಿಂಗವು ಇಂತೀ ತ್ರಿವಿಧವು ಲಿಂಗವೆಂದೇ ಹೇಳಲ್ಪಟ್ಟಿತ್ತು. ॥೨೮॥

**ಗುರುದೇವಂ ಮಹಾದೇವಂ ಏಕೀಭಾವಂ ಚ ಭಾವಯೇತ್ ।**
**ಭಾವದ್ವಯಂ ಚ ಭಾವೇನ ನರಕೇ ಕಾಲಮಕ್ಷಯಮ್ ॥**

ಟೀಕು: ಗುರುವನ್ನೂ, ಪರಮೇಶ್ವರನನ್ನೂ ಒಂದೇ ಭಾವವಾಗಿ ಭಾವಿಸಬೇಕು. ಅವು ಬೇರೆ ಬೇರೆ ಎಂದರೆ ಎರಡೆಂದು ಭಾವಿಸುವುದರಿಂದ ನರಕದಲ್ಲಿ ಅನೇಕ ಕಾಲವಿಹನು. ॥೨೯॥

**ಗುರುಸಾಹಿತ್ಯಭಕ್ತಾನಾಂ ಸದ್ಗುರುರ್ಲಿಂಗಲೀಯತೇ ।**
**ಲೋಕೇ ಭಾವಮಯಂ ದೇವಿ ಚಂಡಾಲೋ ಗುರುಪಾತಕಃ ॥**

ಟೀಕು: ಗುರುವಿನಿಂದ ಉಪದೇಶವಾದಂಥಾ ಭಕ್ತರುಗಳಿಗೆ ಭಾವವಾವುದು ಎಂದರೆ, ಸದ್ಗುರುವು ಲಿಂಗದಲ್ಲಿಯೇ ಅಡಗಿಹನು ಎಂದು ಭಾವಿಸುವುದು. ಈ ಭಾವವಲ್ಲದೇ ಇದ್ದರೆ ಲೋಕದಲ್ಲಿ ಆತನು ಚಂಡಾಲನು, ಗುರುಪಾತಕನು ಎಂಬುದರ್ಥ. ॥೩೦॥

**ಯೋ ಗುರುರ್ಮೃತಭಾವೇನ ತದ್ದಿನಂ ಯಸ್ಯ ಶೋಚ್ಯತೇ ।**
**ಗುರುಲಿಂಗಪ್ರಸಾದಂ ಚ ನಾಸ್ತಿ ನಾಸ್ತಿ ವರಾನನೇ ॥**

ಟೀಕು: ಎಲೆ ಪಾರ್ವತಿ ದೇವಿಯೆ, ಆವನಾನೊಬ್ಬನು ಗುರುವು ಸತ್ತನೆಂಬ ಭಾವದಿಂದ ಆ ದಿನದಲ್ಲಿ ಅಳುತ್ತಿದ್ದಾನು ಆತಂಗೆ ಗುರುಲಿಂಗ ಪ್ರಸಾದವು ಇಲ್ಲ ಇಲ್ಲ ಎಂದು ಈಶ್ವರನು ಹೇಳಿದನು. ॥೩೧॥

**ಪ್ರಾಣೇನ ಲಿಂಗಸಂಯುಕ್ತಂ ಪ್ರಾಣಲಿಂಗೇನ ಸಂಯುತಾಃ ।**
**ಪ್ರಾಣೇನ ತ್ಯಕ್ತಕಾಲೇ ಚ ತದ್ದೇಹಂ ದಾಹವರ್ಜಿತಮ್ ॥**

ಟೀಕು: ಪ್ರಾಣದೊಡನೆ ಲಿಂಗವು ಕೂಡಿತ್ತು, ಲಿಂಗದೊಡನೆ ಪ್ರಾಣವು ಕೂಡಿತ್ತು. ಪ್ರಾಣಹೋಹ ಕಾಲದಲ್ಲಿ ಆ ದೇಹವನು ದಹನವ ಮಾಡಲಾಗದು. ॥೩೨॥

**ದಗ್ಧಸ್ಯ ದಹನಂ ನಾಸ್ತಿ ಪಾಕಸ್ಯ ಪಚನಂ ನಹಿ ।**
**ಜ್ಞಾನಾಗ್ನಿದಗ್ಧದೇಹಸ್ಯ ನ ಚ ದಗ್ಧಂ ನ ಚ ಕ್ರಿಯಾ ॥**

ಟೀಕು: ಸುಟ್ಟುದನು ಮತ್ತೆ ಸುಡುಹದಿಲ್ಲ, ಅಟ್ಟಂಥಾದ್ದ ಮತ್ತೆ ಅಡುಹದಿಲ್ಲ. ಜ್ಞಾನಾಗ್ನಿಯಿಂದ ದಹನವಾದ ದೇಹಕ್ಕೆ ಮತ್ತೆ ದಹನವೂ ಇಲ್ಲ. ಕ್ರಿಯಾಕಾರ್ಯವೂ ಇಲ್ಲ. ॥೩೩॥

**ವರಾನನೇ ಗುರುಸ್ತಸ್ಮಾತ್ಪಶೂನಾಂ ಪತಿರೇವ ಚ ।**
**ಪಶುಪಾಶವಿನಿರ್ಮುಕ್ತಂ ಗುರೋರ್ಭಾವಾ ನಿರೀಕ್ಷಣಮ್ ॥**

ಟೀಕು: ಎಲೆ ಪಾರ್ವತಿ ದೇವಿ, ಅದು ಕಾರಣವಾಗಿ ಶ್ರೀ ಗುರುವು ಪಶುಪ್ರಾಣಿಗಳಿಗೆ ಪತಿಯೆಂದು ಹೇಳಲ್ಪಟ್ಟನು. ಆ ಶ್ರೀ ಗುರುವಿನ ಮನೋಹರವಹಂಥಾ ನೋಟವು ಪಶುಗಳ ಮಾಯಾಪಾಶವನು ಕೆಡಿಸುವುದು. ॥೩೪॥

**ಪತಿರೇವ ಗುರುಸ್ತ್ರೀಣಾಂ ಪರಾನುಗ್ರಹನೈವ ಚ ।**
**ಸುರತಾರ್ಪಿತಸಂತುಷ್ಟಃ ಸುಭೋಗೀ ಲಿಂಗಸಂಯುತಮ್ ॥**

ಟೀಕು: ಸ್ತ್ರೀಯರುಗಳಿಗೆ ಗಂಡನೇ ಗುರು, ಪರರುಗಳ ಕೈಯಿಂದ ಉಪದೇಶವಂ ಕೊಳ್ಳಲಾಗದು. ಆ ಪುರುಷನು ಸುರತಕ್ರೀಡೆಯಿಂದ ಸಂತುಷ್ಟನಾಗಿ ಲಿಂಗ ಸಹಿತವಾಗಿ ಭೋಗಿಸುವನು. ॥೩೫॥

**ದೀಕ್ಷಾ ಚ ಪತಿಪತ್ನ್ಯಾ ಚ ಗುರುರೇಕೋ ಭವೇತ್ಖಲು ।**
**ತನ್ಮನಃ ಪ್ರಾಣನೈವೇದ್ಯಂ ರತಿಸಂಗಂ ವರಾನನೇ ॥**

ಟೀಕು: ಗಂಡ-ಹೆಂಡಿರುಗಳಿಗೆ ಒಬ್ಬ ಗುರುವೇ ದೀಕ್ಷೆಯ ಕೊಡಬೇಕು. ಅವರಿಬ್ಬರ ಮನಸ್ಸು ಪ್ರಾಣ ರತಿಕ್ರೀಡೆ ಪರಮೇಶ್ವರಂಗೆ ಅರ್ಪಿತವಹುದು ಎಂದು ಈಶ್ವರನು ಪಾರ್ವತಿಗೆ ಹೇಳಿದನು. ॥೩೬॥

**ಗುರುದೀಕ್ಷಾ ಪತಿಪತ್ನ್ಯೋರನ್ಯಾಸ್ಯಶ್ಚ ನ ಭವತಿ ।**
**ಶಿವದೀಕ್ಷಾರತಂ ಪ್ರಾಪ್ತೇ ಭಕ್ತಿಹೀನಂ ತು ಶಾಂಕರಿ ॥**

ಟೀಕು: ಗಂಡ-ಹೆಂಡಿರುಗಳಿಗೆ ಬೇರೆ ಬೇರೆ ದೀಕ್ಷೆಯು ಇಬ್ಬರು ಗುರುಗಳಿಂದ ಸಲ್ಲದು. ಹಾಗೇನಾದರೂ ದೀಕ್ಷೆಯಾಗಿ ಅದು ಭಕ್ತಿ ಹೀನವಹುದು ಕಾಣಾ ಪಾರ್ವತಿ ಎಂದು ಈಶ್ವರನು ಹೇಳಿದನು. ॥೩೭॥

**ಪತಿಪತ್ನ್ಯಾ ಚ ಪುತ್ರಾಶ್ಚ ದಾಸೀಗೃಹಪದಾತಿನಃ ।**
**ಏಕದೀಕ್ಷಾ ಭವೇದ್ದೇವಿ ವಿಶೇಷಶ್ಶುದ್ಧಭಕ್ತಿಮಾನ್ ॥**

ಟೀಕು: ಗಂಡ-ಹೆಂಡರು, ಮಕ್ಕಳು, ತೊತ್ತಿಗರು, ಭಂಟರುಗಳಿಗೆ ಒಬ್ಬ ಗುರುವಿನಿಂದ ದೀಕ್ಷೆಯಂ ಪಡವುದು ಅತ್ಯಂತ ಉತ್ತಮವು. ॥೩೮॥

**ಗುರುರೇಕೋ ಭವೇಲ್ಲಿಂಗಂ ಏಕದೀಕ್ಷಾ ವಿಶೇಷತಃ ।**
**ಪ್ರಸಾದಂ ತ್ವೇಕಮೇವಸ್ಯಾತ್ಸತ್ಯಮೇವ ಮಯೋದಿತಮ್ ॥**

ಟೀಕು: ಗುರು ಒಬ್ಬನು, ಲಿಂಗ ಒಂದು, ದೀಕ್ಷೆಯೂ ಒಂದೇ, ಪ್ರಸಾದವೂ ಒಂದೇ ಆದ ದೀಕ್ಷೆಯು ಅತ್ಯಂತ ಉತ್ತಮ. ಇದು ಸತ್ಯವೆಂದು ನನ್ನಿಂದ ಹೇಳಲ್ಪಟ್ಟಿತು. ॥೩೯॥

**ನ ಭವೇತ್ಪತಿಪತ್ನ್ಯೋಶ್ಚ ಗುರುರೇಕೋ ವರಾನನೇ ।**
**ಗುರುದ್ವಯಂ ಚ ಲಿಂಗಂ ಚ ದ್ವಯಮೇವ ಭವೇತ್ಸದಾ ॥**

ಟೀಕು : ಗಂಡ-ಹೆಂಡಿರುಗಳಿಗೆ ಒಬ್ಬ ಗುರುವಾಗದಿದ್ದರೆ ಭಕ್ತಿಯಲ್ಲ. ಇಬ್ಬರು ಗುರು ಎರಡು ಲಿಂಗವೆಂದು ಹೇಳಲ್ಪಡುವುದು. ಅದು ನಿಮಿತ್ಯ ಒಬ್ಬ ಗುರುವೇ ಶ್ರೇಷ್ಠವು. ॥೪೦॥

**ತಥಾ ದೀಕ್ಷಾ ದ್ವಿಧಾ ಚೈವ ಪ್ರಸಾದಂ ದ್ವಿವಿಧಂ ಭವೇತ್ ।**
**ಯೇ ತದ್ವಯಮಿದಂ ದೇವಿ ವಿಶೇಷಂ ಪಾತಕಂ ಭವೇತ್ ॥**

ಟೀಕು: ದೀಕ್ಷೆಯು ಗಂಡ-ಹೆಂಡಿರುಗಳಿಗೆ ಇಬ್ಬರಿಂದ ದೀಕ್ಷೆ ಎನ್ನಿಸಿಕೊಂಬುದು ಪ್ರಸಾದವೂ ಎರಡಾಗುವುದು. ಹೀಗೆ ಇವು ಎರಡೆರಡಾದರೆ ಮಹಾಪಾತಕವು. ॥೪೧॥

**ಪತಿ-ಪತ್ನಿ ಗುರೋರ್ಲಿಂಗಂ ಏಕೀಭಾವಂ ನ ಪಶ್ಯತಿ ।**
**ಅಷ್ಟವಿಂಶತಿಕೋಟ್ಯಸ್ತು ನರಕೇ ಕಾಲಮಕ್ಷಯಮ್ ॥**

ಟೀಕು: ಗಂಡ-ಹೆಂಡಿರು ತಮ್ಮ ತಮ್ಮ ಗುರುವನು, ಲಿಂಗವನು ಒಂದೇ ಭಾವದಲ್ಲಿ ಕಾಣದಿದ್ದರೆ, ಅವರು ಇಪ್ಪತ್ತೆಂಟು ನರಕದಲ್ಲಿ ಅನೇಕ ಕಾಲ ಇರುತ್ತಿಹರು. ॥೪೨॥

**ಇಲ್ಲಿಯ ಪರಿಯಂತರ ಗುರು ಮಹಾತ್ಮೆಯು.**
**(ಪ್ರಕೃತಿಕಾಯ, ಜ್ಞಾನಕಾಯ ಲಕ್ಷಣವು)**

**ದೇವ್ಯೋವಾಚ:**

**ಯಥಾ ಪ್ರಕೃತಿಕಾಯಶ್ಚ ಜ್ಞಾನಕಾಯಸ್ತಥಾ ಭವೇತ್ ।**
**ಭೇದಂ ಕಿಂ ದ್ವಯೋರ್ಜಾತಂ ಕಿಂ ಬೀಜಂ ಕಥಯಸ್ವ ಮೇ ॥**

ಟೀಕು: ಪ್ರಕೃತಿಕಾಯ ಹೇಗೆ ಅಹುದು, ಜ್ಞಾನಕಾಯ ಹೇಗೆ ಅಹುದು, ಈ ಎರಡಕ್ಕೆ ಭೇದವಾವುದು, ಬೀಜವೇನು, ಈ ತಾತ್ಪರ್ಯವನು ನನಗೆ ಹೇಳು ಎಂದು ದೇವಿಯು ಬೆಸಗೊಂಡಳು. ॥೪೩॥

**ಈಶ್ವರ ಉವಾಚ**

**ಮಹಂತಂ ಮನುತೇ ಯೇನ ಯಚ್ಛ್ರೋತ್ರೇಯಸ್ಯ ಸದ್ಗುರೋಃ ।**
**ತಚ್ಛಬ್ದಂ ಬೀಜಮೇವೋಕ್ತಂ ಜ್ಞಾನಾಂಗಸ್ಯ ಪ್ರಗಲ್ಬತೇ ॥**

ಟೀಕು: ಸದ್ಗುರುವಿನ ದೆಸೆಯಿಂದ ಅವನಾನೊಬ್ಬನ ಕಿವಿಯಲ್ಲಿ ಬ್ರಹ್ಮೋಪದೇಶವು ಹೇಳಲ್ಪಟ್ಟಿತ್ತು. ಆ ಶಬ್ದವೇ ಬೀಜವೆಂದು ಹೇಳಲ್ಪಡುವುದು ಕಾಣಾ ಎಂದು ಈಶ್ವರನು ಹೇಳಿದನು. ॥೪೪॥

**ಶಿವಮಂತ್ರಾಕ್ಷರಂ ಬೀಜಂ ಗುರೋರಾತ್ಮಸಮಾಹಿತಮ್ ।**
**ಸ ಪ್ರಾಣಿ ಜ್ಞಾನಕಾಯಶ್ಚ ಪ್ರಕೃತಿಪ್ರತಿಬಿಂಬಕಮ್ ॥**

ಟೀಕು: ಗುರುವಿನ ದೆಸೆಯಿಂದುಪದೇಶವ ಪಡೆದಂಥಾ ಶಿವಮಂತ್ರಾಕ್ಷರವೇ ಬೀಜವೆನಿಸಿಕೊಂಬುದು. ಅಂಥಾ ಪ್ರಾಣಿ ಜ್ಞಾನಕಾಯವೆನಿಸಿಕೊಂಬನು, ಶಿವಮಂತ್ರದೀಕ್ಷೆ ಇಲ್ಲದವನು ಪ್ರಕೃತಿಕಾಯವೆನಿಸಿಕೊಂಬನು. ॥೪೫॥

ಪ್ರಕೃತಿಕಾಯವೆಂದೆರ ಅಜ್ಞಾನಿಯೆಂದರ್ಥ.

**ಪ್ರಕೃತಿಜ್ಞಾನಕಾಯಶ್ಚ ದ್ವಿಧಾ ಭೇದಂ ಸಮನ್ವಿತಮ್ ।**
**ಯೇ ತದ್ಗುಣನಭಾವೇನ ಜ್ಞಾನಕಾಯಸ್ತಥಾ ಭವೇತ್ ॥**

ಟೀಕು: ಕಾಯವು, ಪ್ರಕೃತಿ ಕಾಯ ಜ್ಞಾನಕಾಯವೆಂದು ಎರಡು ಭೇದವಾಗಿಹುದು. ಶಿವಮಂತ್ರ ದೀಕ್ಷೆಯಾಗಲಾಗಿ ಪ್ರಕೃತಿಕಾಯವು ತೊಗಲಿ ಜ್ಞಾನಕಾಯವಹುದು. ॥೪೬॥

**ದಿವಾರಾತ್ರಂ ನ ಚ ಜ್ಞಾನಂ ನ ಕಾಲಶ್ಚಾಪಿ ಕಲ್ಪಿತಮ್ ।**
**ನ ಪ್ರಸೂತೋ ಯಥಾ ಜ್ಞಾನಂ ದರ್ಪಣಂ ಪ್ರತಿಬಿಂಬವತ್ ॥**

ಟೀಕು: ಹಗಲು–ರಾತ್ರಿ ಎಂಬುದಿಲ್ಲ, ಕಾಲವೆಂಬುದಿಲ್ಲ. ಕಲ್ಪಿತವೆಂಬುದಿಲ್ಲ. ಇದು ಜ್ಞಾನಕಾಯನ ಲಕ್ಷಣವು, ಅಜ್ಞಾನದ ಲಕ್ಷಣವು ಹೇಗೆಂದರೆ ಕನ್ನಡಿಗೊಳಗಣ ಛಾಯೆಯ ಮರ್ಯಾದೆ, ಅದರ ತಾತ್ಪರ್ಯವೇನೆಂದರೆ ದಿವರಾತ್ರಿ ಕಲ್ಪಿತವೆಂದು ಆಚರಿಸುಹವೆ ಅಜ್ಞಾನದ ಲಕ್ಷಣವೆಂದು ಹೇಳಲ್ಪಡುವುದು. ಇದು ಕರ್ಮಸಂಪಾದನೆಯೆಂದರಿವುದು. ॥೪೭॥

**ಭಾಲೇ ತ್ರಿಪುಂಡ್ರಕಂ ಯತ್ ಸ್ಯಾತ್ ಗಲೇರುದ್ರಾಕ್ಷಮಾಲಿಕಾ ।**
**ವಕ್ತ್ರೇ ಷಡಕ್ಷರಮಂತ್ರಂ ಸ ರುದ್ರೋ ನಾತ್ರ ಸಂಶಯಃ ॥**

ಟೀಕು:ಆವನಾನೊಬ್ಬನ ಲಲಾಟದಲ್ಲಿ ಭೂತಿ, ಕೊರಳಲ್ಲಿ ರುದ್ರಾಕ್ಷಿಯ ಮಾಲೆ, ಮುಖದಲ್ಲಿ ಷಡಕ್ಷರ ಮಂತ್ರವಿದ್ದುದು, ಆತನು ರುದ್ರನು, ಇದಕ್ಕೆ ಸಂಶಯವಿಲ್ಲ . ॥೪೮॥

**ದೇವ್ಯೋವಾಚ:**

**ಅಕ್ಷರಸ್ಯ ಕಥೋತ್ಪತ್ತಿಃ ಅಕ್ಷರಸ್ಯ ಕಥಂ ಗುಣಮ್ ।**
**ಅಕ್ಷರಸ್ಯ ಕಥಂ ಭೇದಂ ಬ್ರೂಹಿ ಮೇ ಪರಮೇಶ್ವರಾ ॥**

ಟೀಕು: ಷಡಕ್ಷರದ ಉತ್ಪತ್ತಿ ಹೇಗೆ, ಅದರ ಗುಣವು ಹೇಗೆ, ಷಡಕ್ಷರದ ಭೇದವಾವುದು, ಎಲೆ ಪರಮೇಶ್ವರನೆ ಹೇಳು ಎಂದು ಪಾರ್ವತಿಯು ಬೆಸಗೊಂಡಳು. ॥೪೯॥

**ಈಶ್ವರೋವಾಚ:**

**ಯಥಾ ಕ್ಷೇತ್ರಸ್ಯ ಬೀಜಸ್ಯ ಸಂಬಂಧಿತಂ ತಥಾ ।**
**ತತ್ರ ಸ್ಥಾನೇ ಪ್ರವರ್ತತೇ ತಸ್ಯ ಜಾತಮಿದಂ ಶ್ರುಣು ॥**

ಟೀಕು: ಕ್ಷೇತ್ರಕ್ಕೂ, ಬೀಜಕ್ಕೂ ಸಂಬಂಧವೆರಡು ಪ್ರಕಾರವಾಯಿತ್ತು, ಆ ಮರ್ಯಾದೆಯಲ್ಲಿ ಅಕ್ಷರಕ್ಕೂ ಎರಡು ಪ್ರಕಾರವಾಯಿತ್ತು ಕೇಳಾ ಎಂದು ಈಶ್ವರನು ಹೇಳಿದನು. ॥೫೦॥

**ತಚ್ಛಿಷ್ಯ ಜ್ಞಾನಕ್ಷೇತ್ರಾದಿ ಕರ್ಣದ್ವಾರ ಯಥಾ ಗುರುಃ ।**
**ತನ್ಮಂತ್ರಂ ಬೀಜಮೇವೋಕ್ತಂ ತತ್ರ ಕ್ಷೇತ್ರಸಮನ್ವಿತಮ್ ॥**

ಟೀಕು: ಆ ಶಿಷ್ಯನ ಜ್ಞಾನಕ್ಷೇತ್ರವೆನಿಸಿದಂಥಾ ಕರ್ಣದಲ್ಲಿ ಶ್ರೀಗುರುವು ಉಪದೇಶಿಸಿದಂಥಾ ಶಿವಮಂತ್ರವು ಬೀಜವೆನಿಸಿಕೊಂಡಿತ್ತು. ಆ ಶಿಷ್ಯನ ಕರ್ಣವು ಕ್ಷೇತ್ರವೆನಿಸಿಕೊಂಬುದು. ॥೫೧॥

**ಬೀಜಂ ದ್ವಿವಿಧರೂಪಂ ಸ್ಯಾನ್ಮಂತ್ರಂ ನ್ಯಾಸಂ ವರಾನನೇ ।**
**ಏಕೋದೀರ್ಘಸ್ತು ಯಃ ಕುರ್ಯಾತ್ಪಂಚಮಂ ಶಕ್ತಿಮಾಶ್ರಯೇತ್ ॥**

ಟೀಕು: ಹಿಂದೆ ಹೇಳಿದಂತೆ ಐದಕ್ಷರನೆಂಬ ಬೀಜವು ಮಂತ್ರವೆಂದು ನ್ಯಾಸವೆಂದು ಎರಡು ಭೇದವನುಳ್ಳುದಹುದು. ನ್ಯಾಸವು ಶಕ್ತಿಯನಾಶ್ರಯಿಸುವುದೆಂ–ದರಿವುದು. ॥೫೨॥

**ಅಕ್ಷರಾದಿ ತವರ್ಗಾಂತಂ ಪವರ್ಗಾಂತಂ ಶುಭಾನನೇ ।**
**ಯವರ್ಗಾಕ್ಷರತ್ರಯಂ ಚೈವ ಪ್ರಣವಾದಿ ಪ್ರಶಸ್ಯತೇ ॥**

ಟೀಕು: ತವರ್ಗದ ಕಡೆಯಕ್ಷರವು ಮೊದಲಕ್ಷರವೆಂದರಿವುದು. ಪವರ್ಗದ ಕಡೆಯಕ್ಷರವು ಯವರ್ಗದ ಮೂರಕ್ಷರವು ಇವು ಪಂಚಾಕ್ಷರಂಗಳು ಪ್ರಣವದ ಮೊದಲಲ್ಲಿ ಪ್ರಶಸ್ತವಾಗಿಹುದು. ॥೫೩॥

**ದಾಂತಂ ಭಾಂತಂ ಚ ವಾಂತಂ ತು ತೃತೀಯಸ್ವರಭೂಷಿತಮ್ ।**
**ಲಾಂತಂ ಪಕ್ಷಸ್ವರೂಪೇತಂ ಮಾಂತಂ ಪಂಚಾಕ್ಷರೀ ಸ್ಮೃತಮ್ ॥**

ಟೀಕು: ದ ಕಾರದ ಕಡೆಯಕ್ಷರವು, ಬ ಕಾರದ ಕಡೆಯದು, ವ ಕಾರದ ಕಡೆಯ ಮೂರನೆಯ ಸ್ವರದಿಂದ ಅಲಂಕರಿಸಲ್ಪಟ್ಟುದು. ಲ ಕಾರದ ಕಡೆಯ ದೀರ್ಘವನುಳ್ಳುದು. ಮ ಕಾರದ ಕಡೆಯದು ಇದೀಗ ಪಂಚಾಕ್ಷರೀ ಎಂದು ಹೇಳಲ್ಪಟ್ಟುದು. ॥೫೪॥

**ಪ್ರಣವೇನ ಸಮಾಯುಕ್ತಂ ಷಡಕ್ಷರಮಿಹೋಚ್ಯತೇ ।**
**ಏತಸ್ಮಿನ್ ಪ್ರಣವೇನೈವಾದ್ವಯೋರ್ನಾಮ ಪ್ರವರ್ತತೇ ॥**

ಟೀಕು: ಪ್ರಣವವು ಕೂಡಿ ಷಡಕ್ಷರವೆಂದು ಹೇಳಲ್ಪಟ್ಟಿತ್ತು. ಈ ಪ್ರಣವದಲ್ಲಿ ಎರಡು ಹೆಸರು ವರ್ತಿಸಲ್ಪಡುತ್ತಂ ಇಹುದು. ॥೫೫॥

**ತ್ವದೀಯಂ ಪ್ರಣವಂ ಕಿಂಚಿನ್ಮದೀಯಂ ಪ್ರಣವಂ ತಥಾ ।**
**ದ್ವಿತೀಯಂ ದೇವಿ ಮಂತ್ರಾಣಾಂ ಶಕ್ತಿಭೂತಂ ನ ಸಂಶಯಃ ॥**

ಟೀಕು: ಎಲೆ ದೇವಿ ಎನ್ನ ಸಂಬಂಧವಹಂಥಾ ಪ್ರಣವು ಕಿರಿದುಂಟು. ಮಂತ್ರಂಗಳಿಗೆ ಇದು ಶಕ್ತಿಮಯವು ಕಾಣಾ, ಇಂತು ಈ ಎರಡು ಪ್ರಕಾರವು ಸಂಶಯವಿಲ್ಲದುದೆಂದು ಈಶ್ವರನು ಹೇಳಿದನು. ॥೫೬॥

**ಅಕಾರೋಕಾರ ಮಕಾರೋ ಮದೀಯ ಪ್ರಣವಸ್ಥಿತಾ ।**
**ಉಕಾರಶ್ಚ ಮಕಾರಶ್ಚ ಅಕಾರಶ್ಚ ಕ್ರಮೇಣ ವೈ ।**
**ದ್ವಿತೀಯಂ ಪ್ರಣವಂ ವಿದ್ಧಿ ತ್ರಿಮಾತ್ರಫಲಮುತ್ತಮಮ್ ॥**

ಟೀಕು: ಅಕಾರ ಉಕಾರ ಮಕಾರಂಗಳು ನನ್ನ ಸಂಬಂಧವಾದಂಥಾ ಪ್ರಣವಂಗಳು. ಉಕಾರ ಮಕಾರ ಅಕಾರವು ಕ್ರಮತಪ್ಪದೆ ತ್ರಿಮಾತ್ರೆಯೆನಿಸೂದು. ಈ ಮೂರಕ್ಷರವು ನನ್ನ ನಿನ್ನ ಸಂಬಂಧವಹುದು. ಈ ಪ್ರಕಾರದ ಅರಿವು ಆರಿಗೂ ಅಳವಡದು. ಲಿಂಗಜಂಗಮವು "ನನ್ನ ನಿನ್ನ ಸಂಬಂಧ" ಕಾಣಾ ಎಂದು ಈಶ್ವರನು ಹೇಳಿದನು. ॥೫೭॥

**ಷಡಕ್ಷರಂ ಸಮಾಖ್ಯಾತಂ ಷಡಾನನ ಸಮನ್ವಿತಮ್ ।**
**ಷಡ್ಭೇದಂ ಯೇ ನ ಜಾನಾತಿ ಪೂಜಾಯಾಂ ನಿಷ್ಫಲಂ ಭವೇತ್ ॥**

ಟೀಕು: ಈ ಷಡಕ್ಷರವು ನನ್ನ ಆರು ಮುಖದಿಂದ ಕೂಡಿಹುದು. ಈ ಆರಕ್ಷರದ ಭೇದವನು ಆವನಾನೊಬ್ಬನು ಅರಿಯನು. (ಆವನು) ಮಾಡಿದ ಪೂಜೆಯು ನಿಷ್ಫಲವಹುದು. (ವಿಶೇಷಃ ಈಶ್ವರಂಗೆ ಪುರಾಣ ಪ್ರಸಿದ್ಧವಾಗಿ ಆರು ಮುಖವುಂಟೆಂಬುದು ತಾತ್ಪರ್ಯಾರ್ಥವು.) ॥೫೯॥

**ಷಡಕ್ಷರಾಣಿ ಕ್ರಮಶಃ ಷಡಾಧಾರಸ್ಯ ಬೀಜಕಮ್ ।**
**ಯೇ ತದ್ಬೀಜಾಕ್ಷರಂ ಜ್ಞಾತ್ವಾ ದುರ್ಲಭಂ ಶ್ರುಣು ॥**

ಟೀಕು: ಈ ಷಡಕ್ಷರಂಗಳು ಷಡಾಧಾರ ಚಕ್ರಕ್ಕೆ ಕ್ರಮ ತಪ್ಪದೆ ಬೀಜಾಕ್ಷರಂಗಳು. ಈ ಬೀಜಾಕ್ಷರಂಗಳನರಿವುದು ದುರ್ಲಭವೆಂದು ಈಶ್ವರನು ಪಾರ್ವತಿಗೆ ಹೇಳಿದನು. ॥೬೦॥

**ಏಕಮೇಕಾಕ್ಷರಂ ಚೈವ ಪಂಚಪಂಚಪ್ರವರ್ತತಾಮ್ ।**
**ಇತಿ ಭೇದ ಕಳಾಜ್ಞಾನಂ ದುರ್ಲಭಂ ಶ್ರುಣು ಪಾರ್ವತಿ ॥**

ಟೀಕು: ಒಂದೊಂದು ಅಕ್ಷರವು ಐದು ಪ್ರಕಾರವಾಗಿ ವರ್ತಿಸುವುದು. ಈ ಕ್ರಮವು ಮುಂದೆ ಅರ್ಪಿತ ಸ್ಥಳದಲ್ಲಿ ವಿಸ್ತಾರವಾಗಿ ಹೇಳಿಹೆನು. ಈ ಭೇದವನರಿವುದು ಸುಲಭವಲ್ಲವೆಂದು ಈಶ್ವರನು ಹೇಳಿದನು. ॥೬೧॥

**ದೇವ್ಯೋವಾಚ:**

**ಜ್ಞಾನಕಾಯಃ ಸಮಾಖ್ಯಾತಂ ಷಡಾಧಾರೈಶ್ಚ ಸಂಯುತಃ ।**
**ತದ್ಬೀಜಾಕ್ಷರಮೇವೇಶ ಕಿಂ ಭೇದಂ ಕಥಯಸ್ವ ಮೇ ॥**

ಟೀಕು: ಜ್ಞಾನಕಾಯವು ಷಡಾಧಾರಗಳಿಂದ ಕೂಡಿಹುದು. ಅದರ ಬೀಜಾಕ್ಷರವನು ಏನು ಭೇದವೆಂಬುದನು ಎಲೆ ಪರಮೇಶ್ವರನೆ ಎನಗೆ ಹೇಳು ಎಂದು ಬೆಸಗೊಂಡಳು. ॥೬೨॥

**ಈಶ್ವರ ಉವಾಚ:**

**ಆಧಾರಸ್ಯ ನಕಾರಂ ಚ ಸ್ವಾಧಿಷ್ಠಾನಂ ಮಕಾರಕಮ್ ।**
**ಶಿಕಾರಂ ಮಣಿಪೂರಂ ಚ ವಕಾರಂ ಚ ಹ್ಯನಾಹತಮ್ ॥**
**ಯಕಾರಂ ಚ ವಿಶುದ್ಧಿಸ್ಯಾದಾಜ್ಞಾ ಪ್ರಣವಮೇವ ಚ ।**
**ಏವಂ ಬೀಜಾಕ್ಷರಭೇದಂ ಜ್ಞಾನಕಾಯಮಿದಂ ಶ್ರುಣು ॥**

ಟೀಕು: ಆಧಾರ ಚಕ್ರಕ್ಕೆ ನಕಾರವು, ಸ್ವಾದಿಷ್ಠಾನ ಚಕ್ರಕ್ಕೆ ಮಕಾರವು, ಮಣಿಪೂರಕ ಚಕ್ರಕ್ಕೆ ಶಿಕಾರವು. ಅನಾಹತಕ್ಕೆ ವಕಾರವು, ವಿಶುದ್ಧಿ ಚಕ್ರಕ್ಕೆ ಯಕಾರವು, ಆಜ್ಞಾಚಕ್ರಕ್ಕೆ ಪ್ರಣವವು, ಈ ಪ್ರಕಾರದಲ್ಲಿ ಬೀಜಾಕ್ಷರಭೇದವು. ಇದೀಗ ಜ್ಞಾನಕಾಯವು ಕಾಣ ಪಾರ್ವತಿ ಕೇಳು ಎಂದು ಈಶ್ವರನು ನುಡಿದನು. ॥೬೩–೬೪॥

**ದೇವ್ಯೋವಾಚ:**

**ಕಥಂ ಲಿಂಗಸ್ಥಲೇ ಚೈವ ಸದಾ ಲಿಂಗಕಳಾ ಭವೇತ್ ।**
**ಕಿಂ ಭೇದಂ ಸ್ಥಾಪಿತೋ ಯಸ್ಯ ಕಾರುಣ್ಯಾದ್ಬ್ರೂಹಿ ಶಂಕರ ॥**

ಟೀಕು: ಲಿಂಗಸ್ಥಲದಲ್ಲಿ ಲಿಂಗ ಕಳೆಯು ಹೇಗೆ ಅಹುದು, ಅವುದಾನೊಂದು ಕಳೆಯನು ಸ್ಥಾಪಿಸುವ ಭೇದವಾವುದು, ಇದನು ಕರುಣದಿಂದ ತಿಳಿಸು ಎಂದಳು. ॥೬೫॥

**ಕಿಂ ವಾ ವಸ್ತು ಯಥಾ ಜಾತಂ ಕಿಂ ಗ್ರಾಹ್ಯಂ ಕಿಂ ತು ಭೇದತಃ ।**
**ಕಳಾ ಸ್ಥಾಪ್ಯ ಯಥಾ ಭೇದಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ವಸ್ತುವೆಂದರೇನು, ಅದು ಹೇಗೆ ಆಯಿತು, ಅದನು ಗ್ರಹಿಸುವ ಭೇದವೇನು, ಕಳೆಯ ಸ್ಥಾಪಿಸುವ ಭೇದವೇನು, ಎಲೆ ಪರಮೇಶ್ವರನೆ ತಿಳಿಸುವೆಯಾ ಎಂದಳು. ॥೬೬॥

**ಯಥಾ ಅಗ್ನಿಸ್ತಥಾ ಕಾಷ್ಠೇ ಯಥಾ ಕ್ಷೀರಸ್ತಥಾ ಘೃತಮ್ ।**
**ಯಥಾ ತಿಲೇ ತಥಾ ತೈಲಂ ಸರ್ವತ್ರಾವಸ್ಥಿತಾ ಕಳಾ ॥**

ಟೀಕು: ಕಾಷ್ಠದಲ್ಲಿ ಅಗ್ನಿ ಹೇಗೆ ಹಾಗೆ, ಹಾಲಿನಲ್ಲಿ ತುಪ್ಪವು ಹೇಗೆ ಹಾಗೆ. ಎಳ್ಳಿನಲ್ಲಿ ಎಣ್ಣೆಯು ಹೇಗೆ ಹಾಗೆ, ಎಲ್ಲಾ ತಾವಿನಲ್ಲಿಯೂ ಕಳೆಯು ಇರುತ್ತಂ ಇಹುದು. ॥೬೭॥

**ಜ್ವಲತ್ಕಾಲಾನಲಾಭಾಸಾ ತಟಿತ್ಕೋಟಿಸಮಪ್ರಭಾ ।**
**ತಸ್ಯಾರ್ಧಾ ಚ ಶಿಖಾ ಸೂಕ್ಷ್ಮಂ ಚಿದ್ರೂಪಾ ಪರಮಾ ಕಳಾ ॥**

ಟೀಕು: ಹೊಳವುತ್ತಿಹ ಕಾಲಾಗ್ನಿಯೋಪಾದಿಯ ಕಾಂತಿಯನುಳ್ಳಂಥಾ, ಕೋಟಿ ಮಿಂಚುಗಳಿಗೆ ಸಮಾನವಹಾ ಪ್ರಭೆಯನುಳ್ಳಂಥಾ, ಜ್ಞಾನಸ್ವರೂಪವಹಂಥಾ, ಉತ್ತಮವಹಂತಾ, ಸೂಕ್ಷ್ಮವಹಂತಾ ಕಳೆಯು ಶಿಖಾಗ್ರದಲ್ಲಿ ಇರುತ್ತಂ ಇಹುದು. ॥೬೮॥

**ವಾಚಾತೀತಾ ಮನೋತೀತಾ ವರ್ಣಾತೀತಾ ಚ ತತ್ತ್ವತಃ ।**
**ಜ್ಞಾನಾತೀತಂ ನಿರಂಜನ್ಯಾ ಕಳಯಾ ಸೂಕ್ಷ್ಮ ಭಾವಯೇತ್ ॥**

ಟೀಕು: ಆ ಕಳೆಯು ವಾಕ್ಕುಗಳ ಮೀರಿತ್ತು, ಅಕ್ಷರಂಗಳ ಮೀರಿತ್ತು. ಮನಸನೂ ಮೀರಿತ್ತು, ಜ್ಞಾನವನೂ ಮೀರಿತ್ತು. ನಿರಂಜನವಹಂತಾ ಸೂಕ್ಷ್ಮ ಕಳೆಯೆಂದು ಭಾವಿಸೂದು. ॥೬೯॥

**ಏವಂ ಭೇದಾಕಳಾ ದೇವಿ ಸದ್ಗುರುಃ ಶಿಷ್ಯಮಸ್ತಕೇ ।**
**ಹಸ್ತಾಬ್ಜಮಥನಂ ಗ್ರಾಹ್ಯಂ ತಸ್ಯ ಭಾವ ಕರೋದಿತಮ್ ॥**

ಟೀಕು: ಎಲೇ ದೇವಿಯೇ, ಶ್ರೀಗುರುವು ಶಿಷ್ಯನ ಮಸ್ತಕದಲ್ಲಿ ತನ್ನ ಹಸ್ತಕಮಲವನ್ನಿರಿಸಿ ಈ ಪ್ರಕಾರವಹ ಕಳೆಯನು ಪ್ರತಿಷ್ಠೆಯನು ಮಾಡಿದಾತನಾಗಿರಲು, ಆ ಕಳೆಯು ಗುರುವಿನ ಹಸ್ತದಿಂದ ಹುಟ್ಟುತ್ತೆಂದರಿವುದು. ॥೭೦॥

**ಯಥಾ ಕಳಾ ತಥಾ ಭಾವಂ ಯಥಾ ಭಾವಂ ತಥಾ ಮನಃ ।**
**ಯಥಾ ಮನಸ್ತಥಾ ದೃಷ್ಟಿರ್ಯಥಾ ದೃಷ್ಟಿಸ್ತಥಾ ಸ್ಥಲಮ್ ॥**

ಟೀಕು: ಹೇಂಗೆ ಕಳೆಯೋ ಹಾಂಗೆ ಭಾವವು, ಹೇಂಗೆ ಭಾವವೋ ಹಾಂಗೆ ಮನವು. ಹೇಂಗೆ ಮನಸ್ಸೋ ಹಾಂಗೆ ದೃಷ್ಟಿಯು, ಹೇಂಗೆ ದೃಷ್ಟಿಯೋ ಹಾಂಗೆ ಸ್ಥಲವು. ॥೭೧॥

**ಕರ್ಣದ್ವಾರಂ ಯಥಾ ವಾಕ್ಯಂ ಗುರುಣಾ ಲಿಂಗದೀಯತೇ ।**
**ಇಷ್ಟಪ್ರಾಣಸ್ತಥಾ ಭಾವಂ ತ್ರಿಧಾಮೈಕ್ಯಂ ವರಾನನೇ ॥**

ಟೀಕು: ಕರ್ಣದ್ವಾರದಲ್ಲಿ ಹೇಗೆ ಮಂತ್ರವಾಕ್ಯವು ಹೇಳಿ ಗುರುವಿಂದಲೇ ಲಿಂಗವು ಕೊಡಲ್ಪಟ್ಟಿತ್ತು. ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗವು ಈ ಮೂರು ಲಿಂಗಗಳು ಒಂದೇ ಕಾಣ ಎಲೆ ದೇವಿಯೆಂದು ಈಶ್ವರನು ಹೇಳಿದನು. ॥೭೨॥

**ದೇವ್ಯೋವಾಚ:**

**ಲಿಂಗಭಕ್ತಿರಿತಿ ಖ್ಯಾತಾ ಗುರುಹಸ್ತೇ ಚ ಜಾಯತೇ ।**
**ಕಿಂ ವಾ ಹರಕರೋತ್ಪತ್ತಿಃ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಲಿಂಗಭಕ್ತಿಯೆಂಬುದು ಗುರುವಿನ ಅಂಗೈಯಲ್ಲಿ ಹುಟ್ಟಿತ್ತು. ಇದು ಪ್ರಸಿದ್ಧವಾಗಿ ನನ್ನಿಂದ ಹೇಳಲ್ಪಟ್ಟಿತ್ತು. ಮುನ್ನ ಹೇಗೆ ಹುಟ್ಟಿತ್ತು ಎಂಬುದನ್ನು ಹೇಳು ಎಂದಳು. ॥೭೩॥

**ವಪುರೇವ ಸಮುತ್ಪನ್ನಂ ತತ್ಪ್ರಾಣಂ ಮಿಶ್ರಿತಂ ಭವೇತ್ ।**
**ಯಥಾ ಗುರುಕರೇ ಜಾತೋ ಲಿಂಗಭಕ್ತಿವಿಭೇದತಃ ॥**

ಟೀಕು: ಪ್ರಾಣವು ದೇಹದ ಕೂಡೆ ಹುಟ್ಟಿತ್ತು. ಆ ದೇಹದೊಡನೆ ಮಿಶ್ರವಾದಂತ ಪ್ರಾಣವು ಗುರುವಿನ ಹಸ್ತದಲ್ಲಿ ಹುಟ್ಟಿ ಲಿಂಗಭಕ್ತಿಯನುಳ್ಳುದಾಯಿತು. ॥೭೪॥

**ತತ್ಪ್ರಾಣೋ ಲಿಂಗದೇಹಶ್ಚ ಜಾತಾ ಗುರುಕರೇಽಪಿ ಚ ।**
**ಆಚಾರಂ ಗೌರವಂ ಲೈಂಗ್ಯಂ ಜಂಗಮಂ ಚ ಪ್ರಸಾದಕಮ್ ॥**
**ಮಹಾಲಿಂಗಮಿದಂ ಜ್ಞೇಯಂ ಷಡ್ವಿಧಂ ವ್ರತಮಾಚರೇತ್ ।**
**ಇತಿ ಭೇದಂ ನ ಜಾನಾತಿ ಪ್ರಸಾದಂ ನಿಷ್ಫಲಂ ಭವೇತ್ ॥**

ಟೀಕು: ಆ ಪ್ರಾಣನು ಗುರುವಿನ ಹಸ್ತದಲ್ಲಿ ಹುಟ್ಟಿ ಲಿಂಗದೇಹಿಯೆನಿಸಿಕೊಂಡನು. ಆ ಪ್ರಕಾರವಹಂತಾ ಜ್ಞಾನಿಯು ಪುರುಷನು, ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಇಂತೀ ಆರು ಪ್ರಕಾರವಹಂತ ಲಿಂಗವ್ರತವನು ಅರಿತು ಆಚರಿಸೂದು, ಈ ಭೇದವನ್ನು ಅರಿಯದಿದ್ದರೆ ಪ್ರಸಾದವು ನಿಷ್ಫಲವಹುದು. ॥೭೫–೭೬॥

**ದೇವ್ಯೋವಾಚ:**

**ಬಾಹ್ಯಾಂಗೇ ದೃಶ್ಯತೇ ಲಿಂಗಂ ಪ್ರಾಣದೇಹಸ್ಯ ಮಧ್ಯತಃ ।**
**ಪ್ರಾಣಸ್ಯ ಲಿಂಗಸಂಬಂಧಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ದೇಹದ ಮೇಲೆ ಲಿಂಗವು ಕಾಣಲ್ಪಡುತ್ತಿಹುದು, ದೇಹದೊಳಗೆ ಪ್ರಾಣವಿದ್ದುದು. ಪ್ರಾಣಂಗೆ ಲಿಂಗವು ಸಂಬಂಧವಾದ ಪ್ರಕಾರವನು ಪರಮೇಶ್ವರನೇ ಹೇಳು ಎಂದಳು. ॥೭೭॥

**ಈಶ್ವರೋವಾಚ:**

**ತಥಾಪಿ ಪ್ರಾಣಲಿಂಗಸ್ಯ ವೇದ್ಯತೇ ಸರ್ವಮಿಂದ್ರಿಯಮ್ ।**
**ವೇದ್ಯತೇ ಸರ್ವದೇಹಾನಾಂ ಪಾವಕೋ ಸಲಿಲಂ ಯಥಾ ॥**

ಟೀಕು: ಅಗ್ನಿಯು ಉದಕವನು ಹೇಂಗೆ ಉಷ್ಣವನು ಮಾಡುವನು. ಆ ಪ್ರಕಾರದಲ್ಲಿ ಲಿಂಗ ಸಂಪರ್ಕದಿಂದ ಸರ್ವೇಂದ್ರಿಯವನ್ನುಳ್ಳಂಥಾ ಪ್ರಾಣನು ತನ್ನ ಪೂರ್ವಗುಣವನ್ನು ಬಿಟ್ಟು ಲಿಂಗಕಳೆಯನೆ ವೇದಿಸಿ ಪ್ರಾಣವೇ ಲಿಂಗವೆನಿಸಿದನು–ಎಂದು ಶಿವನು ಪಾರ್ವತಿಗೆ ಹೇಳಿದನು. ॥೭೮॥

**ಘಟಮಧ್ಯಸ್ಥಿತಂ ತೋಯಮಗ್ನಿರ್ಜ್ವಲತಿ ಬಾಹ್ಯತಃ ।**
**ಅಗ್ನಿಜ್ವಲನಸಂಯೋಗಾದುಷ್ಣಂ ಭವತಿ ವಾರಿಣಃ ॥**

ಟೀಕು: ಮಡಕೆಯೊಳಗೆ ಉದಕವಿಹುದು. ಅಗ್ನಿಯು ಹೊರಗೆ ಉರಿಯುತ್ತಿಹುದು. ಅಗ್ನಿಜ್ವಾಲೆಯ ಸಂಪರ್ಕದಿಂದ ಉದಕವು ಉಷ್ಣವಹುದು. ಈ ಪ್ರಕಾರದಲ್ಲಿ ಸತ್ಕ್ರಿಯನೆ ಮಾಡಲಾಗಿ ಪ್ರಾಣಂಗೆ ಲಿಂಗಕಳೆ ಸಂಬಂಧಿಸುವುದು. ॥೭೯॥

**ಅಂತರ್ಜ್ಞಾನಂ ಬಾಹ್ಯಕ್ರಿಯಾ ಏಕೀಭಾವಂ ವಿಶೇಷತಃ ।**
**ಯಥಾ ಜಲಂ ತಥಾ ಕುಂಭೇ ಬಾಹ್ಯಸ್ಯಾಗ್ನೇ ಪ್ರಭಾವತಃ ॥**

ಟೀಕು: ಅಂತರಂಗದಲ್ಲಿ ಜ್ಞಾನವು, ಬಹಿರಂಗದಲ್ಲಿ ಸತ್ಕ್ರಿಯೆಯು ಇರುತ್ತಿರಲಾಗಿ ಏಕಭಾವವಹುದು. ಅದು ಹೇಗೆಂದರೆ ಹೊರಗೆ ಇದ್ದ ಅಗ್ನಿಯ ಸಾಮರ್ಥ್ಯದಿಂದ ಕುಂಭದೊಳಗೆ ಇದ್ದ ಉದಕವು ಹೇಗೆ ಉಷ್ಣವಹುದು ಆ ಪ್ರಕಾರದಲ್ಲಿ ಲಿಂಗದ ಸತ್ಕ್ರಿಯೆಯು ಆಚಾರದಿಂದ ಪ್ರಾಣಂಗೆ ಲಿಂಗಕಳೆ ಸಂಬಂಧವಾಯಿತ್ತು. ॥೮೦॥

**ಯಥಾ ಕುಂಭೇ ಜಲಂ ದೇವಿ ಲೀಯ್ಯತೇ ಹ್ಯಗ್ನಿಸಂಪುಟಾತ್ ।**
**ಜ್ಞಾನಂ ಬಾಹ್ಯಕ್ರಿಯಾ ವೇದ್ಯಂ ತತ್ಪ್ರಾಣೋ ಲಿಂಗವೇದಿತಮ್ ॥**

ಟೀಕು: ಎಲೆ ಪಾರ್ವತಿಯೇ ಅಗ್ನಿಸಂಪರ್ಕದ ದೆಸೆಯಿಂದ ಘಟದೊಳಗಿದ್ದ ಉದಕವು ಹೇಗೆ ಬತ್ತಿ ಬಯಲಾಯಿತ್ತು. ಬಾಹ್ಯದ ಸತ್ಕ್ರಿಜ್ಞಾನದಲ್ಲಿ ವೇದಿಸಿ ಆ ಪ್ರಾಣನು ಲಿಂಗಸಂಬಂಧವನು ಎಯ್ದುವನು ಎಂಬುದಾಗಿ ತಿಳಿ. ॥೮೧॥

**ತದ್ದೇಹಮಿಂದ್ರಿಯೇಣೈವ ಸರ್ವದಾ ಲಿಂಗಭೋಗಿನಾಮ್ ।**
**ತನ್ಮುಖಂ ಪಂಚವಕ್ತ್ರಂ ಚ ಪ್ರಾಣಲಿಂಗಸ್ಯ ಲಕ್ಷಣಮ್ ॥**

ಟೀಕು: ಪ್ರಾಣನಪೂರ್ವಗುಣವಳಿದು ಪ್ರಾಣಲಿಂಗಿಯ ಆ ದೇಹವು ಆವಾಗಲೂ ಲಿಂಗ ಸಹಿತವಾಗಿ ಇಂದ್ರಿಯ ಭೋಗವನು ಭೋಗಿಸುವನು. ಪ್ರಾಣಲಿಂಗಿಯ ಲಕ್ಷಣವು ಹೇಗೆಂದಡೆ ಈಶ್ವರನ ಪಂಚಮುಖಂಗಳಿಗೆ ಪಂಚೇಂದ್ರಿಯಗಳ ಸುಖವನರ್ಪಿಸುವುದು. ॥೮೨॥

**ನ ಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಂ ಕ್ರಿಯಾ ।**
**ನ ಪಶ್ಯತ್ಯಂಧಕೋ ದಗ್ಧಂ ಪಶ್ಯನ್ ದಹತಿ ಪಂಗುಲಃ ॥**

ಟೀಕು: ಕ್ರಿಯೆ ಇಲ್ಲದೆ ಇದ್ದ ಜ್ಞಾನವು ಪ್ರಯೋಜನವಿಲ್ಲ. ಹಾಗೆಯೇ ಜ್ಞಾನವಿಲ್ಲದೇ ಇದ್ದ ಕ್ರಿಯೆಯು ಪ್ರಯೋಜನವಿಲ್ಲ. ಅದಕ್ಕೆ ದೃಷ್ಟಾಂತವೇನೆಂದರೆ: ಒಬ್ಬ ಅಂಧಕ, ಒಬ್ಬ ಹೆಳವ ಇಬ್ಬರು ಇರುತ್ತಿಹರು. ಆವುದಾನೊಂದು ಬೇವುತ್ತಿರಲಾಗಿ ಅಂಧಕನು ತ್ರಾಣಿಯಾದುದು ನಿಮಿತ್ತವಾಗಿ ಅಗ್ನಿಯನು ಶಾಂತವ ಮಾಡಬಲ್ಲನು. ಹೆಳವನು ಕಣ್ಣಿನಲ್ಲಿ ಕಾಬನು,

ಕೈ–ಕಾಲು ಪಟುತ್ವವಿಲ್ಲವಾಗಿ ಅಗ್ನಿಯ ಶಾಂತಿಯ ಮಾಡಲರಿಯನು. ಅದು ನಿಮಿತ್ಯ ಪ್ರಯೋಜನವಾದುದಿಲ್ಲ ಎಂದರೆ ಕ್ರಿಯಾಜ್ಞಾನವು ಬೇಕೆಂಬುದರ್ಥವು. ॥೮೩॥

**ಗವಾಂ ಸರ್ಪಿ ಶರೀರಸ್ಥಂ ನ ತರೋಪ್ಯಾತ್ಮಪೋಷಣಮ್ ।**
**ವಿಕೃತಂ ಕರ್ಮರಂಜಿತಂ ಪುನಸ್ತು ಸಾಂತುಭೇಷಜಮ್ ॥**

ಟೀಕು: ಈ ಶ್ಲೋಕದಲ್ಲಿ ಕ್ರಿಯೆಯನ್ನೇ ಪ್ರತಿಷ್ಠೆಯಂ ಮಾಡುತ್ತಿದ್ದಾನು. ಗೋವುಗಳ ಹೊಟ್ಟೆಯಲ್ಲಿ ಘೃತವಿಹುದು. ಇರಲಾಗಿ ಗೋವುಗಳು ಪುಷ್ಟಿಯಾಗವು. ಆ ಗೋವುಗಳನ್ನು ಪೋಷಿಸಿ ರಕ್ಷಿಸುವವನು, ಕ್ಷೀರನ ದಧಿಯ ಮಾಡಿ ಮಥನಿಸಿ ಆ ನವನೀತವನ್ನು ಕಾಸಿ ತುಪ್ಪವ ಮಾಡಿ ಗೋವುಗಳಿಗೆ ಕುಡಿಸಲಾಗಿ ದಿನದಿನಕ್ಕೆ ಪುಷ್ಟಿಯಹವು. ಈ ಮರಿಯಾದೆಯಲ್ಲಿ ಸತ್ಕ್ರಿಯೆಯನು ಮಾಡುತ್ತಿರಲಾಗಿ ಜ್ಞಾನನಹುದು. ಸಮ್ಯಜ್ಞಾನವಾಗಲಿಕ್ಕಾಗಿ ಪ್ರಾಣವೇ ಲಿಂಗಸ್ವರೂಪವಹುದು. ॥೮೪॥

**ದೇವ್ಯೋವಾಚ:**

**ಸ್ಥಾವರಂ ಮಿಶ್ರಿತಂ ಕಿಂ ವಾ ಕಿಂ ವಾ ಮಿಶ್ರಂ ತು ಜಂಗಮಮ್ ।**
**ದ್ವಿಧಾ ಸಂಬಂಧಿತೋ ಯಸ್ಯ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಸ್ಥಾವರದ ಮಿಶ್ರವೇನು, ಜಂಗಮದ ಮಿಶ್ರವೇನು, ಈ ಎರಡರ ಸಂಬಂಧವಾವುದಕ್ಕೆ ಉಂಟೆಂಬುದನು ಎಲೆಪರಮೇಶ್ವರನೇ ಹೇಳು ಎಂದು ಪಾರ್ವತಿಯು ಕೇಳಿದಳು. ॥೮೫॥

**ಈಶ್ವರೋವಾಚ :**

**ಭಕ್ತೋ ಮಾಹೇಶ್ವರಶ್ಚೈವ ಪ್ರಸಾದಿ ಸ್ಥಾವರಂ ಭವೇತ್ ।**
**ಪ್ರಾಣಲಿಂಗಿ ಶರಣ್ಯಶ್ಚಕ್ಯಲಿಂಗೈಕ್ಯೋ ಜಂಗಮಸ್ತಥಾ ॥**

ಟೀಕು: ಭಕ್ತ ಮಾಹೇಶ್ವರ ಪ್ರಸಾದಿ ಈ ಮೂವರು ಸ್ಥಾವರವು, ಪ್ರಾಣಲಿಂಗಿ ಶರಣ ಆಯಿಕ್ಯ ಈ ಮೂವರು ಜಂಗಮವು ಎಂದು ಶಿವನು ಹೇಳಿದನು. ॥೮೬॥

**ಆಚಾರಲಿಂಗಂ ಗುರುಲಿಂಗಂ ಚ ಸ್ಥಾವರಂ ಶಿವಲಿಂಗಕಮ್ ।**
**ಚರಲಿಂಗಂ ಪ್ರಸಾದಂ ಚ ಮಹಾಲಿಂಗಂ ಚ ಜಂಗಮಮ್ ॥**

ಟೀಕು: ಶಿವನು ಷಡ್ವಿಧ ಲಿಂಗಕ್ಕೆ ಭೇದವನು ಹೇಳುತ್ತಿದ್ದಾನೆ. ಆಚಾರಲಿಂಗ ಗುರುಲಿಂಗ ಶಿವಲಿಂಗ ಈ ಮೂರು ಲಿಂಗವು ಸ್ಥಾವರವು. ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಈ ಮೂರು ಜಂಗಮಲಿಂಗವು. ॥೮೭॥

**ಸ್ಥಾವರಂ ಜಂಗಮಂ ಚೈವ ದ್ವಿವಿಧಂ ಲಿಂಗಮುಚ್ಯತೇ ।**
**ಜಂಗಮಂ ಚಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್**

ಟೀಕು: ಸ್ಥಾವರ ಜಂಗಮ ಈ ಎರಡೂ ಒಂದೇ ಲಿಂಗವೆಂದು ಹೇಳಲ್ಪಟ್ಟಿತ್ತು. ಜಂಗಮವನು ಉದಾಸೀನವ ಮಾಡಿದಡೆ ಸ್ಥಾವರಲಿಂಗದಲ್ಲಿ ಮಾಡಿದ ಪೂಜೆಯು ನಿಷ್ಫಲವು. ॥೮೮॥

**ಸ್ಥಾವರಂ ಜಂಗಮಂ ಚೈವ ದ್ವಯಮೇಕಂ ಸಮನ್ವಿತಮ್ ।**
**ಇತಿ ಭೇದಪರಿಜ್ಞಾನಂ ದುರ್ಲಭಂ ಶ್ರುಣು ಪಾರ್ವತಿ ॥**

ಟೀಕು: ಸ್ಥಾವರ ಜಂಗಮವಿವೆರಡೂ ಒಂದೇ ಲಿಂಗವು. ಹೀಗೆಂದು ಮಾಡುವ ಜ್ಞಾನವು ದುರ್ಲಭವು ಕಾಣಾ ಪಾರ್ವತಿಯೇ ಕೇಳು. ॥೮೯॥

**ದೇವ್ಯೋವಾಚ :**

**ದಾಸೋಹಂ ಭಾವಕಂ ಕಿಂ ವಾ ಸೋಹಂ ಭಾವಂ ಚ ಕೀದೃಶೀಮ್ ।**
**ಸೋಹಂ ದಾಸೋಹಯೋರ್ಭೇದಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ದಾಸೋಹಭಾವವೆಂದರೇನು, ಸೋಹಂ ಭಾವವೆಂದಾದುದು. ಸೋಹ ದಾಸೋಹಂಗಳ ಭೇದವನು ಎಲೆ ಪರಮೇಶ್ವರನೇ ಹೇಳು ಎಂದರು. ॥೯೦॥

**ಈಶ್ವರೋವಾಚ:**

**ಭಕ್ತೋ ದಾಸೋಹಂ ಭಾವಂ ಚ ಸೋಹಂ ಭಾವಂ ಚ ಜಂಗಮಃ ।**
**ಭಾವಭೇದ ಸ್ವಯಂ ನಾಸ್ತಿ ಪ್ರಕೃತಿಪ್ರತಿಬಿಂಬವತ್ ॥**

ಟೀಕು: ಭಕ್ತನು ದಾಸೋಹಂ ಭಾವವು, ಜಂಗಮವು ಸೋಹಂ ಭಾವವು, ಈ ಎರಡಕ್ಕೆ ಭೇದವಿಲ್ಲ. ಅದು ಹೇಗೆಂದರೆ ಪ್ರತಿಬಿಂಬದೋಪಾದಿಯಂತೆ. ॥೯೧॥

**ಸೋಹಂ ದಾಸೋಹಮಾಖ್ಯಾತಂ ದ್ವಯೋರ್ನಾಮ ಪ್ರವರ್ತತಾಮ್ ।**
**ಯೇ ತದ್ಭಾವದ್ವಯೋರ್ನಾಸ್ತಿ ಪ್ರತಿಬಿಂಬಸಮನ್ವಿತಮ್ ॥**

ಟೀಕು: ಸೋಹಂ ದಾಸೋಹಂ ಎಂದು ಎರಡು ನಾಮವಾಯತ್ತು. ಈ ಎರಡಕ್ಕೂ ಭೇದವೇ ಇಲ್ಲ. ಇವೆರಡೂ ಪ್ರತಿಬಿಂಬದೋಪಾದಿಯೆಂದರಿವುದು. ಪ್ರತಿಬಿಂಬವೆಂದರೆ ನೆಳಲು, ದೇಹಕ್ಕೂ ನೆಳಲಿಗೂ ಭೇದವಿಲ್ಲ. ಆ ಪ್ರಕಾರವೆಂದು ಭಾವಿಸುವುದು. ॥೯೨॥

**ದೇವ್ಯೋವಾಚ**

**ಭಕ್ತಮಾರ್ಗಂ ಕಥಂ ಭೇದಂ ಭಕ್ತಮಾರ್ಗಂ ಕಥಂ ಗುಣಮ್ ।**
**ಏವಂ ಭೇದಂ ನ ಜಾನಾಮಿ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಭಕ್ತಮಾರ್ಗದ ಭೇದವು ಹೇಗೆ, ಅದರ ಗುಣವು ಹೇಗೆ, ಈ ಭೇದವನು ಅರಿಯೆನು, ಎಲೆ ಪರಮೇಶ್ವರನೆ ಇವುಗಳನ್ನು ಹೇಳು ಎಂದಳು. ॥೯೩॥

**ಈಶ್ವರೋವಾಚ:**

**ಸದಾಚಾರ ಶಿವೇ ಭಕ್ತಿಃ ಲಿಂಗಜಂಗಮಮೇಕಧೀಃ ।**
**ಲಾಂಛನೇನ ಶರಣ್ಯಂ ಚ ಭಕ್ತಸ್ಥಲಸ್ಸುಬುದ್ಧಿಮಾನ್ ॥**

ಟೀಕು: ಸದಾಚಾರದಲ್ಲಿ ನಡಹ, ಶಿವನಲ್ಲಿ ಭಕ್ತಿಯಾಗಿರುಹ, ಲಿಂಗವೂ, ಜಂಗಮವೂ ಒಂದೇಯೆಂಬ ಬುದ್ಧಿಯಾಗಿರುಹ, ಶಿವಲಾಂಛನವ ಕಂಡಡೆ ಶರಣೆನುಹ, ಇದು ಭಕ್ತಸ್ಥಲವು. ॥೯೪॥

**ಭೃತ್ಯಾಚಾರಸ್ಸದಾಚಾರಃ ಲಿಂಗಜಂಗಮರೂಪಿಣಮ್ ।**
**ದ್ವಯಮೇಕಂ ಸಮಾಯುಕ್ತಂ ಭಕ್ತಸ್ಥಲಸ್ಸುಬುದ್ಧಿಮಾನ್ ॥**

ಟೀಕು: ಜಂಗಮವು ಲಿಂಗವು ಒಂದೇ ಎಂದು ಅರಿತು ಭೃತ್ಯಾಚಾರದಲ್ಲಿ ಸೇವೆಯಂ ಮಾಡೂದು ಭಕ್ತಸ್ಥಲವು. ॥೯೫॥

**ಕಿಂಕುರ್ವಾಣಸಮಾಯುಕ್ತಂ ಲಿಂಗರೂಪೇಣ ಜಂಗಮಮ್ ।**
**ಮನಸಾ ಸಹ ಇತ್ಯೇತೇ ಭಕ್ತಸ್ಥಲಸ್ಸುಬುದ್ಧಿಮಾನ್ ॥**

ಟೀಕು: ಮನಸ್ಸಿನಲ್ಲಿ ಕಿಂಕುರ್ವಾಣ ಸಹಿತನಾಗಿ ಲಿಂಗವನೂ, ಜಂಗಮವನೂ ಒಂದೇಯೆಂದು ಅರಿತು ಅರ್ಚನೆಯಂ ಮಾಡುವುದು. ಇದು ಭಕ್ತಸ್ಥಲವು. ॥೯೬॥

**ಅರ್ಥಪ್ರಾಣಾಭಿಮಾನಂ ಚ ಗುರೌ ಲಿಂಗೇ ಚ ಜಂಗಮೇ ।**
**ತಲ್ಲಿಂಗಂ ಜಂಗಮಂ ಪ್ರಾಣಂ ಭಕ್ತಸ್ಥಲಸ್ಸುಬುದ್ಧಿಮಾನ್ ॥**

ಟೀಕು: ಅರ್ಥ ಪ್ರಾಣ ಅಭಿಮಾನವನು ಗುರು ಲಿಂಗ ಜಂಗಮದಲ್ಲಿ ಸಮರ್ಪಿಸೂದು. ಆ ಲಿಂಗ ಜಂಗಮವೇ ಪ್ರಾಣವಾಗಿಹುದು ಭಕ್ತಸ್ಥಲವೆಂದು ಹೇಳಲ್ಪಟ್ಟಿತ್ತು. ॥೯೭॥

**ಮಜ್ಜನಂ ಚ ತ್ರಿಕಾಲೇಷು ಶುಚಿಪಾಕಸಮರ್ಪಿತಮ್ ।**
**ಭವಿಸಂಗಂ ಪರಿತ್ಯಜ್ಯ ಇತ್ಯೇತೇ ಭಕ್ತಕಾರಣಮ್ ॥**

ಟೀಕು: ಮೂರು ವೇಳೆಗಳಲ್ಲಿ ಸ್ನಾನವಂ ಮಾಡಿ, ಶುದ್ಧವಾದಂಥ ಪಾಕವನ್ನು ಸಮರ್ಪಣವ ಮಾಡುವುದು. ಭವಿಗಳ ಸಂಪರ್ಕವಂ ಬಿಡುವುದು ಭಕ್ತಸ್ಥಲವು. ಭವಿಯೆಂದರೆ ಶಿವಮಂತ್ರದೀಕ್ಷೆಯಿಲ್ಲದಾತನು. ಆತನು ಭವಕ್ಕೆ ಭಹನಪ್ಪುದೇ ಕಾರಣವಾಗಿ ಭವಿಯೆನಿಸಿಕೊಂಬನು. ಅಂತಹವನ ಸಂಸರ್ಗವಂ ಮಾಡಲಾಗದು. ॥೯೮॥

**ದೇವ್ಯೋವಾಚ:**

**ಜಂಗಮಂ ಜ್ಞಾನರೂಪಂ ಚ ಉಪಾಧಿ ನಿರುಪಾಧಿಕಮ್ ।**
**ಭಕ್ತಪ್ರಾಣಸಮಾಯುಕ್ತಂ ಇತ್ಯೇತೇ ಲಿಂಗಜಂಗಮಮ್ ॥**

ಟೀಕು: ಜಂಗಮವು ಜ್ಞಾನದ ರೂಪು, ಅಧೀನ ಉಳ್ಳಾತನು ಅಲ್ಲ, ಅನಧೀನವಿಲ್ಲದಾತನೂ ಅಲ್ಲ, ಆ ಭಕ್ತನ ಪ್ರಾಣವೇ ತಾನಾಗಿಹನು, ಇದು ಜಂಗಮದ ಲಕ್ಷಣವು. ॥೧೦೦॥

**ಅಂಗಮಾಚಾರಮಾಶ್ರಿತ್ಯ ಹ್ಯಾಚಾರಂ ಪ್ರಾಣಮಾಶ್ರಿತಮ್ ।**
**ತತ್ಪ್ರಾಣಮಾಶ್ರಿತಂ ಲಿಂಗಂ ತಲ್ಲಿಂಗಂ ಜಂಗಮಾಶ್ರಿತಮ್ ॥**

ಟೀಕು: ಅಂಗವು ಆಚಾರವನಾಶ್ರಯಿಸಿಹುದು, ಆಚಾರವು ಪ್ರಾಣವನಾಶ್ರಯಿಸಿಹುದು, ಪ್ರಾಣವು ಲಿಂಗವನಾಶ್ರಯಿಸಿಹುದು, ಲಿಂಗವು ಜಂಗಮವನಾಶ್ರಯಿಸಿಹುದು ಎಂದು ಈಶ್ವರನು ಹೇಳಿದನು. ॥೧೦೧॥

**ಕಾಮಕ್ರೋಧವಿನಿರ್ಮುಕ್ತಂ ಲೋಭಮೋಹವಿವರ್ಜಿತಮ್ ।**
**ಸರ್ವಸಂಗಪರಿತ್ಯಾಜ್ಯಂ ಶ್ರೇಷ್ಠಂ ತಲ್ಲಿಂಗಜಂಗಮಮ್ ॥**

ಟೀಕು: ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ ಇಂತೀ ಷಡುವರ್ಗವಿರಹಿತನು, ಸರ್ವಸಂಗವ ಪರಿತ್ಯಾಗವ ಮಾಡಿದಾತನು, ಉತ್ತಮವಹಂತಾ ಲಿಂಗಜಂಗಮವೆಂದು ಈಶ್ವರನು ಹೇಳಿದನು. ॥೧೦೨॥

**ದೇವ್ಯೋವಾಚ:**

**ಜಂಗಮಂ ಲಿಂಗಸದ್ಭಾವಂ ಜಂಗಮಸ್ಯ ಕಥಂ ಗುಣಮ್ ।**
**ಜಂಗಮಸ್ಯ ಕಥಾಚಾರಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಜಂಗಮನು ಲಿಂಗದ ಗುಣವುಳ್ಳಾತನು. ಆದರೆ, ಜಂಗಮದ ಗುಣವು ಹೇಗೆ ಜಂಗಮದ ಆಚಾರವು ಹೇಗೆ, ಎತ್ತಿ ಪರಮೇಶ್ವರನೇ ಹೇಳು ಎಂದು ಪಾರ್ವತಿಯು ಕೇಳಿದಳು. ॥೧೦೩॥

**ಈಶ್ವರೋವಾಚ :**

**ಜಂಗಮಂ ಲಿಂಗಮಾಖ್ಯಾತಂ ದ್ವಯೋರ್ನಾಮ ಪ್ರವರ್ತತಾಮ್ ।**
**ಏಕಮೇವಂ ಸಮಾಯುಕ್ತಂ ಶ್ರೇಷ್ಠಂ ತಲ್ಲಿಂಗಜಂಗಮಮ್ ॥**

ಟೀಕು: ಜಂಗಮವು ಲಿಂಗವೆಂದೇ ಹೇಳಲ್ಪಟ್ಟಿತ್ತು. ಎರಡೂ ನಾಮಗಳು ವರ್ತಿಸಿತ್ತು. ಒಂದಾನೊಂದು ಕೂಡಿ ಇಹುದು. ಆ ಲಿಂಗಜಂಗಮವು ಶ್ರೇಷ್ಠವೆಂದೇ ಈಶ್ವರನು ಹೇಳಿದನು. ॥೧೦೪॥

**ಮುಖೇ ಮಂತ್ರೇ ಹೃದಿ ಧ್ಯಾನಂ ಪ್ರಾಣೇಷು ಲಿಂಗಮಾಶ್ರಿತಮ್ ।**
**ಅಷ್ಟಮೂರ್ತೇರಧಿಷ್ಠಾನಂ ಏತಜ್ಜಂಗಮಲಕ್ಷಣಮ್ ॥**

ಟೀಕು: ಮುಖದಲ್ಲಿ ಮಂತ್ರವು, ಹೃದಯದಲ್ಲಿ ಧ್ಯಾನವು, ಪ್ರಾಣದಲ್ಲಿ ಲಿಂಗವು

ಇರುತ್ತಿಹವು. ಪರಮೇಶ್ವರಂಗೆ ಇವು ನೆಲೆವನೆಯಾಗಿ ಇರುಹಣವು ಇದೀಗ ಜಂಗಮ ಲಕ್ಷಣವು. ॥೧೦೫॥

**ನಿಶ್ಯಬ್ದಂ ಸ್ಥಾವರಂ ಚೈವ ಮಂತ್ರಶಬ್ದೋಪದೇಶಯೋಃ ।**
**ಲೋಕಪೂಜ್ಯಕರಂ ದೇವಿ ಶ್ರೇಷ್ಠಂ ತಲ್ಲಿಂಗಜಂಗಮಮ್ ॥**

ಟೀಕು: ಎಲೆ ದೇವಿಯೇ ಕೇಳಾ: ಸ್ಥಾವರವು ಶಬ್ದಮಂತ್ರವಿಲ್ಲ, ಆ ಜಂಗಮವು ಮಂತ್ರ ಶಬ್ದೋಪದೇಶದಿಂದ ಶಬ್ದಮನುಳ್ಳದು. ಅದು ಕಾರಣವಾಗಿ ಶ್ರೇಷ್ಠವಹಂತಾದ್ದು, ಲೋಕಪೂಜ್ಯವಹಂತಾದ್ದು ಜಂಗಮವು. ॥೧೦೬॥

**ನಿಸ್ಸಂಗತ್ವಂ ನಿರಾಭಾರಂ ನಿಸ್ಸೀಮಂ ನಿರುಪಾಧಿಕಮ್ ।**
**ನಿರ್ದೇಹಂ ನಿರ್ಮಲಂ ನಿತ್ಯಂ ತಸ್ಯ ಜಂಗಮಲಕ್ಷಣಮ್ ॥**

ಟೀಕು: ಸಂಗವೂ ಇಲ್ಲ, ಭೂಭಾರಕವೂ ಅಲ್ಲ, ಸೀಮೆಯೂ ಇಲ್ಲ, ಅಧೀನನೂ ಅಲ್ಲ, ದೇಹವೂ ಇಲ್ಲ, ನಿರ್ಮಲನೂ ನಿತ್ಯನೂ ಅಹುದು. ಇಂತಹುದು ಜಂಗಮ ಲಕ್ಷಣವು. ॥೧೦೭॥

**ನಿಷ್ಕಲಂಕಂ ನಿರಪೇಕ್ಷಂ ನಿರ್ದೋಷಿನಿಸ್ಪೃಹಸ್ತಥಾ ।**
**ಸತ್ಯವಾಕ್ಯಂ ದಯಾ ಶಾಂತಂ ಏತಜ್ಜಂಗಮಲಕ್ಷಣಮ್ ॥**

ಟೀಕು: ಕಳಂಕವಿಲ್ಲದ, ಅಪೇಕ್ಷೆಯಿಲ್ಲದ, ದೋಷಿಯೂ ಅಲ್ಲದ ನಿಸ್ಪೃಹನಾದ, ಸತ್ಯವನೇ ನುಡಿವ, ದಯೆಯೂ ಶಾಂತಿಯೂ ಉಳ್ಳಾತನಾಗಿಹುದು ಜಂಗಮ ಲಕ್ಷಣವು. ॥೧೦೮॥

**ಮುಗ್ಧತ್ವಂ ಮೂರ್ತಿಮತ್ತತ್ತ್ವಂ ಮದಮೋಹಾದಿವರ್ಜಿತಮ್ ।**
**ಮಾಯಾದೇಹಮಲಂ ನಾಸ್ತಿ ತಸ್ಯ ಜಂಗಮಲಕ್ಷಣಮ್ ॥**

ಟೀಕು: ಮುಗ್ಧನಾಗಿ ಇರುಹ, ಸ್ಥಿರವಾಗಿ ಇರುಹ, ಅರಿಷಡ್ವರ್ಗವಿಲ್ಲದಿರುಹ, ಮಾಯೆಯು (ಅಜ್ಞಾನವೂ) ದೇಹಗುಣವು ಇಲ್ಲದಿರುಹವು ಇದು ಜಂಗಮ ಲಕ್ಷಣವು. ॥೧೦೯॥

**ಮಾತಾ ನಾಸ್ತಿ ಪಿತಾ ನಾಸ್ತಿ ನಾಸ್ತಿ ನಾಮಕುಲೇಽಪಿ ಚ ।**
**ಅನೋನಿಶ್ಶಂಭುರೂಪೇಣ ಉತ್ತಮಂ ಜಂಗಮಸ್ಥಲಮ್ ॥**

ಟೀಕು: ತಾಯಿ ಇಲ್ಲ, ತಂದೆ ಇಲ್ಲ, ಹೆಸರೂ ಇಲ್ಲ, ಕುಲವೂ ಇಲ್ಲ, ಹುಟ್ಟೂ ಇಲ್ಲದೇ ಇದ್ದ ಶಿವನ ರೂಪೇ ಜಂಗಮಸ್ಥಲವೆಂದು ಈಶ್ವರನು ಹೇಳಿದನು. ॥೧೧೦॥

**ದೇಹಂ ನಾಸ್ತಿ ಕುಲಂ ನಾಸ್ತಿ ನಾಸ್ತಿ ಜಿಹ್ವಾರುಚಿಸ್ತಥಾ ।**
**ನಾಸ್ತಿ ವ್ಯಾಸಂಗಸಂಗೋ ನ ಉತ್ತಮಂ ಜಂಗಮಸ್ಥಲಮ್ ॥**

ಟೀಕು: ದೇಹವಿಲ್ಲದುದು, ಕುಲವಿಲ್ಲದುದು, ಜಿಹ್ವಾಲಂಪಟತ್ವವಿಲ್ಲದುದು, ಅರಿವೇ ರೂಪಾದುದು, ಸರ್ವಸಂಗವೂ ಇಲ್ಲದುದು, ಉತ್ತಮವಹಂತಾದ್ದು ಜಂಗಮಸ್ಥಲವು. ॥೧೧೧॥

**ಶಾಂತ್ಯೈವ ಭಸ್ಮಮುದ್ಧೂಲಂ ಶುಚಿತ್ವಂ ಮಣಿಭೂಷಣಮ್ ।**
**ವಿಷಯಾನ್ ಶಿಕ್ಷಿತೇ ದಂಡಂ ಪರತತ್ತ್ವಂ ಪಾಣಿಖರ್ಪರಮ್ ॥**

ಟೀಕು: ಶಾಂತಿಯೇ ವಿಭೂತಿಯ ಸ್ನಾನವು, ಶುಚಿತ್ವವೇ ರುದ್ರಾಕ್ಷಿಯ ಭೂಷಣವು, ವಿಷಯಂಗಳನು ಶಿಕ್ಷಿಸಿಕೊಂಡಿರುಹನೇ ದಂಡವು (ಕೋಲು). ಪರತತ್ತ್ವವೇ ಕೈಯಲ್ಲಿರುವ ಖರ್ಪರವು. ಇದು ಜಂಗಮಲಕ್ಷಣವೆಂದು ಶಿವನು ಹೇಳಿದನು. ॥೧೧೨॥

**ರೂಪಾರೂಪಸಮಾಖ್ಯಾತಂ ಕಾಮ್ಯನಿಷ್ಕಾಮ್ಯಮೇವ ಚ ।**
**ಮಾಯಾ ನಿರ್ಮಾಯಮೇವೋಕ್ತಮೇತಜ್ಜಂಗಮಲಕ್ಷಣಮ್ ॥**

ಟೀಕು: ಸಾಕಾರ ನಿರಾಕಾರವನುಳ್ಳಾತನಲ್ಲ, ಕಾಮ್ಯ ನಿಷ್ಕಾಮ್ಯವ ಉಳ್ಳಾತನಲ್ಲ, ಮಾಯೆ ಮತ್ತು ನಿರ್ಮಾಯೆಯನುಳ್ಳಾತನಲ್ಲದುದು ಜಂಗಮ ಲಕ್ಷಣವು ಎಂದರೆ ಜಂಗಮವು ಪರಿಪೂರ್ಣನೆಂಬುದು ಅರ್ಥವು. ॥೧೧೩॥

**ಪಂಚಾಕ್ಷರಂ ಪಂಚವಕ್ತ್ರಂ ಪ್ರಣವಮೂರ್ತಿಸಂಯುತಮ್ ।**
**ಪರತತ್ತ್ವಪರಿಜ್ಞಾನಂ ಶ್ರೇಷ್ಠಂ ತಲ್ಲಿಂಗಜಂಗಮಮ್ ॥**

ಟೀಕು : ಪಂಚಾಕ್ಷರವನು, ಪಂಚಮುಖವನು, ಪ್ರಣವದ ಸ್ವರೂಪವನೂ ಅರಿತಿರುವುದೀಗ ಆ ಲಿಂಗಜಂಗಮದ ಲಕ್ಷಣವು. ॥೧೧೪॥

**ಆಚಾರಮಪ್ಯನಾಚಾರಂ ಸೀಮಾನಿಸ್ಸೀಮವರ್ಜಿತಮ್ ।**
**ಆಗಮೋಽನಾಗಮೋ ನಾಸ್ತಿ ತಸ್ಮಾತ್ತಲ್ಲಿಂಗಜಂಗಮಮ್ ॥**

ಟೀಕು: ಆಚಾರವಿಲ್ಲದ ಅನಾಚಾರವೂ ಇಲ್ಲದುದು, ಸೀಮೆಯು ಇಲ್ಲದುದು, ನಿಸ್ಸೀಮೆಯೂ ಇಲ್ಲದುದು, ಆಗಮನವು ಇಲ್ಲದ ನಿರ್ಗಮನವೂ ಇಲ್ಲದುದು ಜಂಗಮ ಲಕ್ಷಣವು. ಎಂದರೆ ಜಂಗಮವು ಶುದ್ಧ ಬ್ರಹ್ಮವೆಂದರ್ಥವು. ॥೧೧೫॥

**ಜಂಗಮಸ್ಯಾಗಮೋ ನಾಸ್ತಿ ಭಕ್ತಸ್ಯ ಗೃಹಮಾಚರೇತ್ ।**
**ಅನ್ಯೇಷಾಂ ಗೃಹಮಿಚ್ಛಂತಿ ಸದ್ಯೋಗೋ ಮಾಂಸಭಕ್ಷಣಮ್ ॥**

ಟೀಕು: ಜಂಗಮಕ್ಕೆ ಗಮನವಿಲ್ಲ, ಭಕ್ತನ ಗೃಹವನೇ ಆಶ್ರಯಿಸುವುದು. ಅನ್ಯರುಗಳ ಗೃಹವನು ಇಚ್ಛೆಸಿದನಾದರೆ ಆ ಕ್ಷಣದಲ್ಲಿ ಗೋಮಾಂಸ ಭಕ್ಷಿಸಿದ ಫಲವೆಂದರಿವುದು. ಭಕ್ತಿಯೆಂದರೆ ತಾತ್ಪರ್ಯದ ನಾಮ. ತಾತ್ಪರ್ಯ ಉಳ್ಳಲ್ಲಿಗೆ ಹೋಗಬೇಕಲ್ಲದೆ ತಾತ್ಪರ್ಯವಿಲ್ಲದವರುಗಳ ಗೃಹಕ್ಕೆ ಹೋಗಲಾಗದು ಎಂಬುದರ್ಥವು. ॥೧೧೬॥

**ಭಕ್ತಾನಾಂ ಸುಖಗೋಷ್ಠಿಸ್ಸ್ಯಾದ್ಧನಂ ಭಕ್ತಸಂಗ್ರಹಮ್ ।**
**ಭಕ್ತೈಃ ಸಹ ಸಂಗ ನಿತ್ಯಂ ಭಕ್ತಾನಾಂ ಗೃಹಮಾಚರೇತ್ ॥**

ಟೀಕು: ಭಕ್ತರುಗಳಿಗೆ ಆನಂದವಹ ಗೋಷ್ಠಿ ಪ್ರಸಂಗವ ಮಾಡೂದು, ಭಕ್ತನು ಕೊಟ್ಟಂತಾ ಧನವನು ಪರಿಗ್ರಹಿಸೂದು, ಭಕ್ತರ ಸಂಸರ್ಗವ ಅನವರತವೂ ಮಾಡೂದು, ಭಕ್ತರುಗಳ ಗೃಹವನು ಆಶ್ರಯಿಸೂದು. ॥೧೧೭॥

**ಭಕ್ತಸ್ತ್ರೀ ಭಕ್ತಗೃಹಂ ಭಕ್ತಮನ್ನಂ ಪರಿಗ್ರಹಮ್ ।**
**ಭಕ್ತಕಾಯನಿವೇದ್ಯಂ ಚ ಇತ್ಯೇತೇ ಜಂಗಮಸ್ಥಲಮ್ ॥**

ಟೀಕು: ಭಕ್ತನ ಸ್ತ್ರೀಯಿಂದ ಸಮಸ್ತ ಅರ್ಚನೆ ಉಪಚರ್ಯವ ಮಾಡಿಸಿಕೊಂಬುದು. ಭಕ್ತನ ಗೃಹವನಾಶ್ರಯಿಸೂದು, ಭಕ್ತನ ಮನೆಯಲ್ಲಿ ಅನ್ನವ ಪರಿಗ್ರಹಿಸೂದು, ಭಕ್ತನ ಕಾಯವನೆ ಸಮರ್ಪಿಸಿಕೊಂಬುದು ಜಂಗಮ ಲಕ್ಷಣವು. ॥೧೧೮॥

**ಲಿಂಗಾರ್ಪಿತಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಪಿತಮ್ ।**
**ಲಿಂಗಜಂಗಮಸಂಯುಕ್ತಂ ಜಂಗಮಸ್ಯ ವಿಶೇಷತಃ ॥**

ಟೀಕು: ಲಿಂಗಾರ್ಪಿತವು ಕರ್ತವ್ಯವಲ್ಲವು, ಜಂಗಮಾರ್ಪಿತವೇ ಕರ್ತವ್ಯವು. ಲಿಂಗಜಂಗಮದೊಳಗೆ ಜಂಗಮವೇ ವಿಶೇಷವು. ॥೧೧೯॥

**ಸ್ಥಾವರಾರ್ಪಿತನೈವೇದ್ಯಂ ನ ತೃಪ್ತಿರ್ಮಮ ಪಾರ್ವತಿ ।**
**ಜಂಗಮಾರ್ಪಿತನೈವೇದ್ಯಂ ಮಮ ತೃಪ್ತಂ ತು ಸರ್ವದಾ ॥**

ಟೀಕು: ಸ್ಥಾವರಕ್ಕೆ ಅರ್ಪಿಸಿದ ನೈವೇದ್ಯವು ನನಗೆ ತೃಪ್ತಿಯಾಗದು, ಜಂಗಮಕ್ಕೆ ಅರ್ಪಿಸಿದ ನೈವೇದ್ಯವು ನನಗೆ ಸದಾಕಾಲವು ತೃಪ್ತಿಯಾಗುತ್ತಲಿಹುದು ಎಂದು ಈಶ್ವರನು ಹೇಳಿದನು. ॥೧೨೦॥

**ನಿರಾಕಾರಂ ಸದಾಕಾರಂ ನಿರ್ವಿಕಾರಂ ಸುಖಾವಹಮ್ ।**
**ಸಾಕ್ಷಾನ್ಮುಕ್ತಿಪದಂ ಭಾವಂ ಉತ್ತಮಂ ಜಂಗಮಸ್ಥಲಮ್ ॥**

ಟೀಕು: ಜಂಗಮಸ್ಥಲವು ನಿರಾಕಾರವಹುದು, ಸತ್‌ಸ್ವರೂಪವಹುದು, ವಿಚಾರವಿಲ್ಲದೆ ಇದ್ದಂಥಾದ್ದು ಅಹುದು, ಸುಖದ ನೆಲೆಮನೆಯಂಥಾದ್ದು ಅಹುದು. ಪ್ರತ್ಯಕ್ಷ ಮುಕ್ತಿಪದವೆಂದು ಈಶ್ವರನು ಹೇಳಿದನು. ॥೧೨೧॥

**ನಾದನಿಷ್ಕಲಲಿಂಗಾನಾಂ ಬಿಂದುನಿಷ್ಕಲಜಂಗಮಮ್ ।**
**ನಾದಬಿಂದುಸಮಾಯುಕ್ತಂ ಶ್ರೇಷ್ಠಂ ತಲ್ಲಿಂಗಜಂಗಮಮ್ ॥**

ಟೀಕು: ಲಿಂಗಕ್ಕೆ ನಾದವಿಲ್ಲ, ಜಂಗಮಕ್ಕೆ ಬಿಂದುವಿಲ್ಲ, ನಾದ ಬಿಂದುವನು ಕೂಡಿಕೊಂಡಾತನು ಆ ಶ್ರೇಷ್ಠ ಲಿಂಗಜಂಗಮವು. ॥೧೨೨॥

**ದೇವ್ಯೋವಾಚ:**

**ಕಿಂ ಭೇದಂ ನಾದರೂಪಂ ಚ ಬಿಂದುಭೇದಂ ತಥೈವ ಚ ।**
**ಕಳಾರೂಪಮಿದಂ ಭೇದಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ನಾದರೂಪುಗಳು ಏನು ಭೇದವಾಗಿಹವು, ಬಿಂದುವಿನ ಭೇದವೇನು, ಕಳೆಯ ಸ್ವರೂಪಿನ ಭೇದವೇನು ಎಂದು ಪಾರ್ವತಿಯು ಶಿವನನ್ನು ಬೆಸಗೊಂಡಳು. ॥೧೨೩॥

**ಈಶ್ವರೋವಾಚ:**

**ನಾದಂ ಗುರುಮುಖಂ ಚೈವ ಬಿಂದುರ್ಲಿಂಗಮುಖಂ ತಥಾ ।**
**ಕಳಾಚರಮುಖಂ ಜ್ಞಾತ್ವಾ ಅರ್ಪಿತಂ ಚ ಪ್ರಸಾದಿನಾಮ್ ॥**

ಟೀಕು: ನಾದವು ಗುರುವಿನ ಮುಖವು, ಬಿಂದುವು ಲಿಂಗದ ಮುಖವು, ಕಳೆಯು ಜಂಗಮದ ಮುಖವು, ಇವು ಪ್ರಸಾದಿಗಳಿಗೆ ಅರ್ಪಿತ ಮುಖವು ಎಂದರಿವುದು, ಎಲೈದೇವಿಯೇ. ॥೧೨೪॥

**ನಾದಬಿಂದುಕಳಾರೂಪಮೇವಂ ತದ್ರೂಪಮರ್ಪಿತಮ್ ।**
**ಗುರುಲಿಂಗಜಂಗಮಂ ಜ್ಞಾತ್ವಾ ಅರ್ಪಿತಂ ಚ ನಿರಂತರಮ್ ॥**

ಟೀಕು: ಸದಾಕಾಲವು ಗುರು ಲಿಂಗ ಜಂಗಮವನರಿತು ನಾದ ಬಿಂದು ಕಳಾರೂಪವನು ಅರ್ಪಿಸಲು ಯೋಗ್ಯವೆಂದು ಶಿವನು ಹೇಳಿದನು. ॥೧೨೫॥

**ಏವಂ ಲಿಂಗಮುಖಂ ಜ್ಞಾತ್ವಾ ಅಂಗಭಾವೇನ ಬಾಧಿತಮ್ ।**
**ಜಂಗಮಸ್ಯ ಮುಖಂ ಜ್ಞಾತ್ವಾ ಸಂಸಾರಸ್ಯ ನ ಬಂಧನಮ್ ॥**

ಟೀಕು: ಈ ಪ್ರಕಾರದಲ್ಲಿ ಅಂಗಭಾವದಲ್ಲಿ ಲಿಂಗಮುಖವನು ಅರಿತರೆ ದೇಹದ ಭಾಗಕ್ಕೆ ಯಾವುದೇ ಬಾಧೆಯುಂಟು. ಆಗ ಜಂಗಮದ ಮುಖವನ್ನು ಅರಿತರೆ ಸಂಸಾರದ ಬಂಧನವಿಲ್ಲ. ಎಂದರೆ ಜಂಗಮವು ಸಾಕ್ಷಾದ್ವಸ್ತು ಎಂಬುದರ್ಥ. ॥೧೨೬॥

**ಪ್ರಸಾದಸ್ಯ ಮುಖಂ ಜ್ಞಾತ್ವಾ ಇಹಪರಂ ಚ ನ ವಿದ್ಯತೇ ।**
**ತ್ರಿವಿಧೈಕ್ಯಮಿದಂ ದೇವಿ ಜ್ಞಾನವಾನ್ ಸೋಹಮೇನ ಚ ॥**

ಟೀಕು: ಪ್ರಸಾದದ ಶ್ರೇಷ್ಠತೆಯನ್ನು ಅರಿತವನು ಇಹಪರವನು ಇಚ್ಛಿಸನು. ತ್ರಿವಿಧವು ಒಂದೇ ಎಂದರಿದಾತನು ನಾನೆ ಅಲ್ಲವೇ ಎಂದು ಪಾರ್ವತಿಗೆ ಶಿವನು ಹೇಳಿದನು. ॥೧೨೭॥

**ದೇವ್ಯೋವಾಚ:**

**ಇಷ್ಟಲಿಂಗಮುಖಂ ಕಿಂ ವಾ ಪ್ರಾಣಲಿಂಗಮುಖಂ ಯಥಾ ।**
**ಭಾವಲಿಂಗಮುಖಂ ಚೈವ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಇಷ್ಟಲಿಂಗದ ಮುಖವಾವುದು, ಪ್ರಾಣಲಿಂಗದ ಮುಖವಾವುದು, ಭಾವಲಿಂಗದ ಮುಖವಾವುದು, ಈ ತ್ರಿವಿಧವನು ಪರಮೇಶ್ವರನೆ ತಿಳಿಸು ಎಂದು ದೇವಿಯು ಕೇಳಿದನು. ॥೧೨೮॥

**ಈಶ್ವರೋವಾಚ:**

**ಇಷ್ಟಲಿಂಗಮುಖಂ ಪಂಚ ತತ್ಪ್ರಾಣೋ ವೇದ್ಯ ತನ್ಮುಖಮ್ ।**
**ಏತನ್ಮುಖಮಿದಂ ಭಾವಂ ಭಾವಲಿಂಗಮುಖಂ ತಥಾ ॥**

ಟೀಕು: ಇಷ್ಟಲಿಂಗದ ಮುಖವು ಐದಾಗಹುದು, ಪ್ರಾಣವಾಯುವಿನ ಮುಖವನ್ನು ಮೆದಿಸಿ ಪ್ರಾಣಲಿಂಗವಾಯಿತ್ತು, ಭಾವವೇದಿಸಿ ಭಾವಲಿಂಗಾಯಿತ್ತು ಕಾಣಾ. ॥೧೨೯॥

**ದೇವ್ಯೋವಾಚ:**

**ಇಷ್ಟಲಿಂಗೇ ಕಥಾ ಪೂಜಾ ಪ್ರಾಣಲಿಂಗಸ್ಯ ಕಿಂ ಭವೇತ್ ।**
**ಭಾವಲಿಂಗಸ್ಯ ಕಾ ಪೂಜಾ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಇಷ್ಟಲಿಂಗದಲ್ಲಿ ಪೂಜೆಯು ಹೇಗೆ, ಪ್ರಾಣಲಿಂಗಕ್ಕೆ ಪೂಜೆಯು ಏನು, ಭಾವಲಿಂಗಕ್ಕೆ ಪೂಜೆ ಯಾವುದು, ಎಲೆ ಪರಮೇಶ್ವರನೆ ಇವುಗಳನ್ನು ಹೇಳು ಎಂದು ಪಾರ್ವತಿಯು ನುಡಿದಳು. ॥೧೩೦॥

**ಅಷ್ಟವಿಧಾರ್ಚನಂ ಕುರ್ಯಾದಿಷ್ಟಲಿಂಗಸ್ಯ ಪೂಜನಮ್ ।**
**ತಲ್ಲಿಂಗಂ ಮನುತೇ  ಯಸ್ತು ಪ್ರಾಣಲಿಂಗಸ್ಯ ಪೂಜನಮ್ ॥**

ಟೀಕು: ಇಷ್ಟಲಿಂಗಕ್ಕೆ ಅಷ್ಟವಿಧ ಅರ್ಚನೆಯಂ ಮಾಡುವುದು. ಆ ಲಿಂಗವನು ಮನಸ್ಸಿನಲ್ಲಿ ಧ್ಯಾನಿಸುವುದು ಪ್ರಾಣಲಿಂಗದ ಪೂಜೆಯು. ॥೧೩೧॥

**ಮನೋ ಲೀಯೋ ನಿರಂಜನ್ಯೋ ಭಾವಲಿಂಗಸ್ಯ ಪೂಜನಮ್ ।**
**ಏತೇ ಲಿಂಗಾರ್ಚನಂ ಜ್ಞಾತ್ವಾ ವಿಶೇಷಂ ಶೃಣು ಪಾರ್ವತಿ ॥**

ಟೀಕು: ಮನಸು ಲಿಂಗದಲ್ಲಿ ತಲ್ಲೀಯ್ಯವಾಗಿಹುದು, ಆ ಲಿಂಗವನು ಮನಸ್ಸಿನಲ್ಲಿಯೇ ಧ್ಯಾನಿಸೂದು, ಭಾವಲಿಂಗದ ಪೂಜೆಯು, ಇದು ಮೂರು ಲಿಂಗದ ಅರ್ಚನೆಯು ಕೇಳಾ ಎಂದು ಪಾರ್ವತಿಗೆ ಶಿವ ನುಡಿದನು. ಲಿಂಗವೆಂದರೆ ಪರಬ್ರಹ್ಮವೆಂಬುದಾಗಿ ಅರಿಯಬೇಕು. ॥೧೩೨॥

**ದೇವ್ಯೋವಾಚ:**

**ಇಷ್ಟಲಿಂಗಾರ್ಪಿತಂ ಕಿಂ ವಾ ಪ್ರಾಣಲಿಂಗಾರ್ಪಿತಂ ಯಥಾ ।**
**ಭಾವಲಿಂಗಾರ್ಪಿತಂ ಕಿಂ ವಾ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಇಷ್ಟಲಿಂಗಕ್ಕೆ ಅರ್ಪಿತವೇನು, ಪ್ರಾಣಲಿಂಗಾರ್ಪಿತವು ಹೇಗೆ, ಭಾವಲಿಂಗಾರ್ಪಿತವಾವುದು, ಎಲೆ ಪರಮೇಶ್ವರನೆ ಇದೆಲ್ಲವನ್ನು ತಿಳಿಸು. ॥೧೩೩॥

**ಈಶ್ವರೋವಾಚ:**

**ಇಷ್ಟಾಲಿಂಗಾರ್ಪಿತಂ ಅಂಗಂ ಪ್ರಾಣಲಿಂಗಾರ್ಪಿತಂ ಮನಃ ।**
**ಭಾವಲಿಂಗಾರ್ಪಿತಂ ತೃಪ್ತಿರಿತಿಭೇದೋ ವರಾನನೇ ॥**

ಟೀಕು: ಇಷ್ಟಲಿಂಗಕ್ಕೆ ತನ್ನ ಶರೀರವನು ಸಮರ್ಪಿಸುವುದು, ಪ್ರಾಣಲಿಂಗಕ್ಕೆ ತನ್ನ ಮನಸ್ಸನ್ನು ಸಮರ್ಪಿಸೂದು. ಭಾವಲಿಂಗಕ್ಕೆ ಪರಿಣಾಮವೆ ಸಮರ್ಪಣವೆಂದು ಈಶ್ವರನು ಹೇಳಿದನು. ॥೧೩೪॥

**ದೇವ್ಯೋವಾಚ:**

**ಷಟ್‌ಸ್ಥಲಂ ಚ ಕಥಂ ಜಾತಂ ಷಟ್‌ಸ್ಥಲಸ್ಯ ಕಥಂ ಗುಣಮ್ ।**
**ಷಟ್‌ಸ್ಥಲಸ್ಯ ಕಥಂ ಭೇದಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಷಟ್‌ಸ್ಥಲವು ಹೇಗೆ ಆಯಿತ್ತು, ಅದರ ಗುಣವು ಹೇಗೆ, ಅದರ ಭೇದವು ಹೇಗೆ ಎಂದು ಶಿವನನ್ನು ದೇವಿಯು ಕೇಳಿದಳು. ॥೧೩೫॥

**ಈಶ್ವರೋವಾಚ:**

**ಶೃಣು ದೇವಿ ಪ್ರವಕ್ಷ್ಯಾಮಿ ಗೋಪ್ಯಾದ್ಗೋಪ್ಯತರಂ ಮಮ ।**
**ಏತದ್ಗುಣಮಿದಂ ಭೇದಂ ಸುಚಿತ್ತೇ ಶೃಣು ಪಾರ್ವತಿ ॥**

ಟೀಕು: ಎಲೆ ದೇವಿ ಕೇಳು, ಇದು ಅತ್ಯಂತ ಗೋಪ್ಯವು. ಈ ಷಡುಸ್ಥಲದ ಭೇದವನು ಹೇಳುವೆನು. ನಿರ್ಮಲ ಮನಸ್ಸಿನವಳಾದ ಪಾರ್ವತಿಯೇ ಕೇಳು ಎಂದು ಮಹಾದೇವನು ನಿರೂಪನ ಕೊಟ್ಟನು. ॥೧೩೬॥

**ಮಹಾಲಿಂಗಮಿದಂ ದೇವಿ ಮನಾತೀತಮಗೋಚರಮ್ ।**
**ನಿರ್ನಾಮಂ ನಿರ್ಗುಣಂ ನಿತ್ಯಂ ನಿರಂಜನೋ ನಿರಾಮಯಮ್ ॥**

ಟೀಕು: ಎಲೆ ದೇವಿಯೇ, ಮಹಾಲಿಂಗವೆಂಬುದೊಂದುಂಟು. ಅದು ಎಂಥಾದ್ದು ಎಂದರೆ ಮನವನೂ ಮಿರಿದುದು, ಅಗೋಚರವು, ಹೆಸರೇ ಇಲ್ಲದುದು, ಮೂರೂ ಗುಣವಿಲ್ಲದುದು, ನಿತ್ಯವಹಂಥಾದ್ದು, ರಂಜನೆ ಇಲ್ಲದಂಥಾದ್ದು, ವ್ಯಾಧಿ ರಹಿತವಾದದ್ದು . ॥೧೩೭॥

**ನಿರ್ಮಲಂ ನಿಷ್ಕಲಂ ಜ್ಞೇಯಂ ನಿರ್ಭೇದಂ ನಿರುಪಾಧಿಕಮ್ ।**
**ಅದ್ವೈತಾನಂದಸಂಪೂರ್ಣಮಸದೃಶಮಿದಂ ಶೃಣು ॥**

ಟೀಕು: ಅದು ನಿರ್ಮಲವಹಂಥಾದ್ದು, ನಿಷ್ಕಳವಹಂಥಾದ್ದು, ಭೇದವಿಲ್ಲದಂಥಾದ್ದು, ಉಪಾಧಿಯಿಲ್ಲದಂಥಾದ್ದು, ಅದ್ವೈತಾನಂದ ಸಂಪೂರ್ಣವಹಂಥಾದ್ದು, ಸಮಾನವಿಲ್ಲದಂಥಾದ್ದು, ಮಹಾಲಿಂಗವೆಂದು ಅರಿಯಲು ಯೋಗ್ಯವು. ॥೧೩೮॥

**ಮಹಾಲಿಂಗಂ ಸಮಾಖ್ಯಾತಂ ಪ್ರಸಾದಲಿಂಗಮುದ್ಭವಮ್ ।**
**ತತಃ ಪ್ರಸಾದಲಿಂಗೇ ಚ ಜಂಗಮಲಿಂಗಮುದ್ಭವಮ್ ॥**

ಟೀಕು: ಮಹಾಲಿಂಗವು ಪ್ರಸಾದಲಿಂಗವಾಗಿ ಉದ್ಭವಿಸಿತ್ತು, ಪ್ರಸಾದಲಿಂಗದಲ್ಲಿ ಜಂಗಮಲಿಂಗವು ಹುಟ್ಟಿತ್ತು. ॥೧೩೯॥

**ತಥಾ ಜಂಗಮಲಿಂಗೇ ಚ ಶಿವಲಿಂಗಸಮುದ್ಭವಮ್ ।**
**ಶಿವಲಿಂಗೇ ಯಥಾ ಚೈವ ಗುರುಲಿಂಗಸಮುದ್ಭವಮ್ ॥**

ಟೀಕು: ಆ ಜಂಗಮಲಿಂಗದಲ್ಲಿ ಶಿವಲಿಂಗವು ಉದಿಸಿತು, ಶಿವಲಿಂಗದಲ್ಲಿ ಗುರುಲಿಂಗವು ಹುಟ್ಟಿತು. ॥೧೪೦॥

**ಗುರುಲಿಂಗೇ ತಥಾಚಾರಲಿಂಗಂ ಚಾಪಿ ಸಮುದ್ಭವಮ್ ।**
**ಷಟ್‌ಸ್ಥಲಂ ಚ ಪರಿಜ್ಞೇಯಮೇಕೀಭಾವಂ ವಿಶೇಷತಃ ॥**

ಟೀಕು: ಗುರುಲಿಂಗದಲ್ಲಿ ಆಚಾರಲಿಂಗವು ಹುಟ್ಟಿತ್ತು. ಇದೀಗ ಲಿಂಗ ಷಡುಸ್ಥಲವೆಂದು ಅರಿವುದು. ಈ ಆರು ಲಿಂಗಗಳನು ಒಂದೇ ಎಂದು ವಿಶೇಷವಾಗಿ ಅರಿವುದೆಂದು ಶಿವನು ಹೇಳಿದನು. (ಇದನ್ನೇ ಅಂಗಸ್ಥಲವೆನ್ನುವರು. ಇದರಲ್ಲಿ ೫೪ ಆವಾಂತರಸ್ಥಲಗಳಿವೆ). ॥೧೪೧॥

**ಪ್ರಾಣಾಮಾಚಾರಲಿಂಗಸ್ಯ ಗುರುಲಿಂಗಂ ಭವತ್ಯಪಿ ।**
**ಪ್ರಾಣಂ ತು ಗುರುಲಿಂಗಸ್ಯ ಶಿವಲಿಂಗಂ ಭವೇತ್ತದಾ ॥**

ಟೀಕು: ಆಚಾರಲಿಂಗಕ್ಕೆ ಗುರುಲಿಂಗವೇ ಪ್ರಾಣವು. ಗುರುಲಿಂಗಕ್ಕೆ ಶಿವಲಿಂಗವೇ ಪ್ರಾಣವು. ॥೧೪೨॥

**ಪ್ರಾಣಂ ಚ ಶಿವಲಿಂಗಸ್ಯ ಜಂಗಮಲಿಂಗಮೇವ ಚ ।**
**ಪ್ರಾಣಂ ಜಂಗಮಲಿಂಗಸ್ಯ ಪ್ರಸಾದಲಿಂಗಮೇವ ಚ ॥**

ಟೀಕು: ಶಿವಲಿಂಗಕ್ಕೆ ಜಂಗಮಲಿಂಗವೇ ಪ್ರಾಣವು, ಜಂಗಮಲಿಂಗಕ್ಕೆ ಪ್ರಸಾದಲಿಂಗವೇ ಪ್ರಾಣವು ॥೧೪೩॥

**ತತ್ಪ್ರಸಾದಗತಂ ಪ್ರಾಣಂ ಮಹಾಲಿಂಗಮಿದಂ ಶೃಣು ।**
**ಐಕ್ಯಪ್ರಾಣಸಮಾಖ್ಯಾತಮೇಕೀಭಾವಂ ಸಮನ್ವಿತಮ್ ॥**

ಟೀಕು: ಪ್ರಸಾದಲಿಂಗಕ್ಕೆ ಮಹಾಲಿಂಗವೇ ಪ್ರಾಣವು. ಈ ಷಡುಸ್ಥಲವು ಒಂದೇ ಆಗಿದೆ ಎಂದು ಈಶ್ವರನು ಹೇಳಿದನು. ॥೧೪೪॥

**ಯಥಾ ಅಗ್ನಿಸ್ತಥಾ ಭಾಸ ತದ್ಭೇದಂ ಶೃಣು ಪಾರ್ವತಿ ।**
**ಇಹೈವ ಭಿನ್ನಭಾವೇನ ಅಂಗಷಡ್ವಿದಮೇವ ಚ ॥**

ಟೀಕು: ಅಗ್ನಿಗೆ ಕಾಂತಿಯು ಹೇಗೆ ಆಯಿತ್ತು. ಆ ಪ್ರಕಾರದಲ್ಲಿ ಅಗ್ನಿಗೂ ಕಾಂತಿಗೂ ಭೇದವಿಲ್ಲದ ಮರ್ಯಾದೆಯಲ್ಲಿ ಮಹಾಲಿಂಗವು ಭೇದಭಾವದಿಂದ ಷಡ್ವಿದ ಲಿಂಗವಾಯಿತ್ತು. ॥೧೪೫॥

**ಲಿಂಗಾರ್ಚನಂ ತು ಯಃ ಕುರ್ಯಾತ್ ತತ್ಪ್ರಾಣೋ ಭಿನ್ನಯೋಗತಃ ।**
**ಏವಂ ಲಿಂಗಂ ಸಮಾಖ್ಯಾತಂ ಷಡ್‌ಭೇದಂ ಚ ಯಥಾಕ್ರಮಮ್ ।**

ಟೀಕು: ಪ್ರಾಣಲಿಂಗಕ್ಕೆಯೂ ಲಿಂಗಕ್ಕೆಯೂ ಭೇದವಿಲ್ಲವೆಂದರಿತು ಲಿಂಗಾರ್ಚನೆಯಂ ಮಾಡೂದೂ, ಈ ಪ್ರಕಾರದಲ್ಲಿ ಆಚರಿಸಲಾಗಿ ಆರು ಪ್ರಕಾರವಹ ಲಿಂಗವು ಕ್ರಮತಪ್ಪದೆ ಸಾಧ್ಯವಹುದು ಎಂದು ಈಶ್ವರನು ದೇವಿಯವಗೆ ಹೇಳಿದನು. ॥೧೪೬॥

**ಅವಿತಲ್ಪಮಿದಂ ಜ್ಞೇಯಂ ತತ್ಪ್ರಾಣೋ ಲಿಂಗಲೀಯತೇ ।**

ಟೀಕು: ವಿಕಲ್ಪವಿಲ್ಲದೆ ಹೀಗೆ ಅರಿತರೆ ಆ ಪ್ರಾಣಲಿಂಗದಲ್ಲಿ (ಮಂತ್ರದೇಹಿಯು) ತಲ್ಲೀಯನಹನು. ಲಿಂಗವೆಂದಡೆ ಪರಬ್ರಹ್ಮವೆಂಬರ್ಥ. ॥೧೪೭॥

**ದೇವ್ಯೋವಾಚ:**

**ಕಿಂ ಭೇದಂ ತು ಮಹಾಲಿಂಗಂ ಕಿಂ ಭೇದಂ ತು ಪ್ರಸಾದಕಮ್ ।**
**ಕಿಂ ಭೇದಂ ಜಂಗಮಲಿಂಗಂ ಕಿಂ ಭೇದಂ ಶಿವಲಿಂಗಕಮ್ ॥**

ಟೀಕು: ಮಹಾಲಿಂಗದ ಭೇದವೇನು, ಪ್ರಸಾದಲಿಂಗದ ಭೇದವೇನು, ಜಂಗಮಲಿಂಗದ ಭೇದವೇನು, ಶಿವಲಿಂಗದ ಭೇದವೇನು ಎಂದು ದೇವಿಯು ಕೇಳಿದಳು. ॥೧೪೮॥

**ಕಿಂ ಭೇದಂ ಗುರುಲಿಂಗಂ ಚ ಕಿಂ ಭೇದಾಚಾರಲಿಂಗಕಮ್ ।**
**ಇತಿ ಭೇದಂ ನ ಜಾನಾಮಿ ಕಾರುಣ್ಯಾದ್ಬ್ರೂಹಿ ಶಂಕರ ॥**

ಟೀಕು: ಗುರುಲಿಂಗವೇನು ಭೇದ, ಆಚಾರಲಿಂಗವೇನು ಭೇದ, ಈ ಆರೂ ಲಿಂಗಗಳ ಭೇದವನರಿಯೇನು. ಕಾರುಣ್ಯದಿಂದ ಎಲೆ ಪರಮೇಶ್ವರನೇ ಹೇಳು ಎಂದಳು. ॥೧೪೯॥

**ಈಶ್ವರೋವಾಚ**

**ಮಹಾಲಿಂಗಮಿದಂ ದೇವಿ ಪ್ರಸಾದಲಿಂಗಮೇವ ಚ ।**
**ತಥಾ ಜಂಗಮಲಿಂಗಂ ಚ ಶಿವಲಿಂಗಂ ತಥೈವ ಚ ॥**
**ಗುರುಲಿಂಗಂ ಯಥಾ ಚೈವ ಆಚಾರಲಿಂಗಮುದ್ಭವಮ್ ।**
**ಏಕೈಕಂ ಪ್ರಾಣಮಾಖ್ಯಾತಮೇಕೈಕಂ ತು ಸಮರ್ಪಿತಮ್ ॥**

ಟೀಕು: ಮಹಾಲಿಂಗವು ಪ್ರಸಾದಲಿಂಗವು ಜಂಗಮಲಿಂಗವು ಶಿವಲಿಂಗವು ಗುರುಲಿಂಗವು ಆಚಾರಲಿಂಗವು ಒಂದಕ್ಕೊಂದು ಪ್ರಾಣವಾಗಿ ಹುಟ್ಟಿದವು. ಒಂದನ್ನೊಂದು ಕೂಡಿಹವು. ॥೧೫೦–೧೫೧॥

**ಏಕೈಕಂ ಮನುತೇ ಯಸ್ತು ಪಂಚಾನನಸಮುದ್ಭವಮ್ ।**
**ಪ್ರಸಾದೋದ್ಭವಮೀಶಾನಂ ತತ್ಪುರುಷಂ ಜಂಗಮೋದ್ಭವಮ್ ॥**
**ಶಿವಲಿಂಗಮಘೋರಂ ಚ ವಾಮದೇವೋ ಗುರುಸ್ತಥಾ ।**
**ಆಚಾರಲಿಂಗಮುದ್ಭೂತಂ ಸದ್ಯೋಜಾತಮಿದಂ ಶ್ರುಣು ॥**

ಟೀಕು: ಒಂದೊಂದು ಲಿಂಗವು ನನ್ನ ಪಂಚಮುಖದಿಂದ ಹುಟ್ಟಿತ್ತೆಂದು ಅವನಾನೊಬ್ಬನು ಅರಿವುದು. ಈಶಾನಮುಖದಿಂದ ಪ್ರಸಾದಲಿಂಗವು ತತ್ಪುರುಷಮುಖದಿಂದ ಜಂಗಮಲಿಂಗವು. ಅಘೋರಮುಖದಿಂದ ಶಿವಲಿಂಗವು. ವಾಮದೇವಮುಖದಿಂದ ಗುರುಲಿಂಗವು, ಸದ್ಯೋಜಾತಮುಖದಿಂದ ಆಚಾರಲಿಂಗವು ಹುಟ್ಟಿದವು. ॥೧೫೨–೧೫೩॥

**ಭಾವಾದಿ ತ್ರಿಷು ಲಿಂಗೇಷು ಜಗಚ್ಛೃಷ್ಟ್ಯರ್ಥಕಾರಣಮ್ ।**
**ಏಕೈಕಂ ತು ದ್ವಯಂ ಜಾತಂ ನವಲಿಂಗಂ ಸಮುದ್ಭವಮ್ ॥**

ಟೀಕು: ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗ ಈ ಮೂರು ಲಿಂಗಗಳಲ್ಲಿ ಲೋಕಸೃಷ್ಟಿ ನಿಮಿತ್ತವಾಗಿ ಒಂದೊಂದು ಲಿಂಗವೂ ಎರಡೆರಡು ಲಿಂಗವಾಯಿತ್ತು. ಅಂತು ಷಡ್ವಿಧಲಿಂಗ ಸಹಿತವಾಗಿ ಒಂಭತ್ತು ಲಿಂಗಗಳು ಹುಟ್ಟಿದವು. ॥೧೫೪॥

**ಆಚಾರಂ ಗುರುಲಿಂಗಂ ಚ ಇಷ್ಟಲಿಂಗೇ ಚ ಜಾಯತೇ ।**
**ಶಿವಲಿಂಗಂ ಚರಲಿಂಗಂ ಚ ಪ್ರಾಣಲಿಂಗೇ ಚ ಜಾಯತೇ ॥**
**ಪ್ರಸಾದಂ ಚ ಮಹಾಲಿಂಗಂ ಭಾವಲಿಂಗೇ ಚ ಜಾಯತೇ ।**
**ಇತ್ಯೇವಂ ನವಲಿಂಗಾನಿ ಕ್ರಮಶೋ ವರ್ಣ್ಯತೇ ಮಯಾ ॥**

ಟೀಕು: ಇಷ್ಟಲಿಂಗದಲ್ಲಿ ಆಚಾರಲಿಂಗ ಮತ್ತು ಗುರುಲಿಂಗವಾದವು. ಪ್ರಾಣಲಿಂಗದಲ್ಲಿ ಶಿವಲಿಂಗ ಮತ್ತು ಜಂಗಮಲಿಂಗಗಳು ಹುಟ್ಟಿದವು. ಭಾವಲಿಂಗದಲ್ಲಿ ಪ್ರಸಾದಲಿಂಗ ಮತ್ತು ಮಹಾಲಿಂಗಗಳು ಹುಟ್ಟಿದವು. ಈ ಪ್ರಕಾರದಲ್ಲಿ ಒಂಭತ್ತು ಲಿಂಗಂಗಳನು ತರುವಾಯಿಂದೆ ಎನ್ನಿಂದೆ ಹೇಳಲ್ಪಟ್ಟಿತ್ತು ಕೇಳಾ ಎಂದು ಈಶ್ವರನು ದೇವಿಗೆ ನಿರೂಪವ ಕೊಟ್ಟನು. ॥೧೫೫–೧೫೬॥

**ದೇವ್ಯೋವಾಚ:**

**ಕಿಂ ಮಿಶ್ರಂ ತು ಸದಾಚಾರಂ ಕಿಂ ಮಿಶ್ರಂ ಗುರುಲಿಂಗಯೋಃ ।**
**ಕಿಂ ಮಿಶ್ರಂ ಗುರುಲಿಂಗಂ ಚ ಕಿಂ ಮಿಶ್ರಂ ಜಂಗಮಸ್ತಥಾ ॥**
**ಪ್ರಸಾದಮಿಶ್ರಿತಂ ಕಿಂ ವಾ ಮಹಾಲಿಂಗಸ್ತಥೈವ ಚ ।**
**ಇತ್ಯೇತೇ ಮಿಶ್ರಿತಂ ಭಾವಂ ಪ್ರಸಾದಂ ಕಥಯಸ್ವ ಮೇ ॥**

ಟೀಕು: ಆಚಾರಲಿಂಗಕ್ಕೆ ಮಿಶ್ರವೇನು, ಗುರುಲಿಂಗವೇನು ಮಿಶ್ರ, ಶಿವಲಿಂಗವೇನು ಮಿಶ್ರ, ಜಂಗಮಲಿಂಗವೇನು ಮಿಶ್ರ, ಪ್ರಸಾದಲಿಂಗವೇನು ಮಿಶ್ರ, ಮಹಾಲಿಂಗವೇನು ಮಿಶ್ರ. ಈ ಪ್ರಕಾರದಲ್ಲಿ ಮಿಶ್ರ ಭಾವವನು ಎನಗೆ ಹೇಳು ಎಂದಳು. ॥೧೫೭–೧೫೮॥

**ಈಶ್ವರೋವಾಚ:**

**ಗುರೋರಾಚಾರಲಿಂಗಂ ಚ ಪ್ರಸಾದಂ ಜಂಗಮಸ್ತಥಾ ।**
**ಶಿವಲಿಂಗಂ ಮಹಾಲಿಂಗಮೇಕೈಕಂ ತು ಸಮಾಶ್ರಿತಮ್ ॥**

ಟೀಕು: ಎಲೆ ದೇವಿಯೇ, ಗುರುಲಿಂಗ ಆಚಾರಲಿಂಗ ಪ್ರಸಾದಲಿಂಗ ಜಂಗಮಲಿಂಗ ಶಿವಲಿಂಗ ಮಹಾಲಿಂಗ ಈ ಆರೂ ಲಿಂಗವೂ ಒಂದನ್ನೊಂದಾಶ್ರಯಿಸಿ ಇಹವು ಕಾಣಾ ಎಂದು ಶಿವನು ಹೇಳಿದನು. ॥೧೫೯॥

**ದೇವ್ಯೋವಾಚ:**

**ಜ್ಞಾನಬೀಜಾಕ್ಷರಂ ಕಿಂ ವಾ ಆಚಾರಸ್ಯ ಚ ಬೀಜಕಮ್ ।**
**ಗುರುಲಿಂಗಂ ಯಥಾ ಬೀಜಂ ಶಿವಲಿಂಗಸ್ಯ ಬೀಜಕಮ್ ॥**
**ಜಂಗಮಸ್ಯ ಕಥಂ ಬೀಜಂ ಪ್ರಸಾದಸ್ಯ ಚ ಬೀಜಕಮ್ ।**
**ಏವಂ ಬೀಜಾಕ್ಷರಂ ಚೈವ ಹ್ಯೇತದಾಖ್ಯಾಹಿ ತತ್ಪದಮ್ ॥**

ಟೀಕು: ಜ್ಞಾನಬೀಜಾಕ್ಷರವು ಅವುದು, ಆಚಾರಲಿಂಗಕ್ಕೆ ಬೀಜವೇನು. ಗುರುಲಿಂಗಕ್ಕೆ ಬೀಜವಾವುದು, ಶಿವಲಿಂಗಕ್ಕೆ ಬೀಜವಾವುದು, ಜಂಗಮಲಿಂಗಕ್ಕೆ ಬೀಜವೇನು, ಪ್ರಸಾದಲಿಂಗಕ್ಕೆ ಬೀಜವಾವುದು, ಈ ಪ್ರಕಾರ ಬೀಜಾಕ್ಷರವನು ಹೇಳಿ ಎಂದು ದೇವಿಯು ಕೇಳಿದಳು. ॥೧೬೦–೧೬೧॥

**ಈಶ್ವರೋವಾಚ**

**ಜ್ಞಾನಂ ಪ್ರಣವಬೀಜಂ ಚ ಆಚಾರಂ ಚ ನಕಾರಯೋಃ ।**
**ಮಕಾರಂ ಚ ಗುರೋರ್ಬೀಜಂ ಶಿಕಾರಂ ಲಿಂಗಮೂರ್ತಿಕಮ್ ॥**
**ವಕಾರಂ ಚ ಚರಂ ಬೀಜಂ ಯಕಾರಂ ಚ ಪ್ರಸಾದಕಮ್ ।**
**ಏವಂ ಬೀಜಾಕ್ಷರಂ ಜ್ಞಾತ್ವಾ ದುರ್ಲಭಂ ಚ ವರಾನನೇ ॥**

ಟೀಕು: ಓಂಕಾರವು ಜ್ಞಾನ ಬೀಜವು, ಆಚಾರಲಿಂಗಕ್ಕೆ ನ ಕಾರ ಬೀಜವು, ಗುರುಲಿಂಗಕ್ಕೆ ಮಕಾರ ಬೀಜವು, ಶಿವಲಿಂಗಕ್ಕೆ ಶಕಾರ ಬೀಜವು, ಜಂಗಲಿಂಗಕ್ಕೆ ವ ಕಾರ ಬೀಜವು, ಪ್ರಸಾದಲಿಂಗಕ್ಕೆ ಯಕಾರ ಬೀಜವು, ಈ ಪ್ರಕಾರದಲ್ಲಿ ಬೀಜಾಕ್ಷರವನು ಅರಿವುದು ದುರ್ಲಭವು ಎಂದು ದೇವಿಯರಿಗೆ ಶಿವನು ನಿರೂ ಪಿಸಿದನು. ॥೧೬೨–೧೬೩॥

**ಓಂಕಾರಂ ಪಂಚಭೂತಾತ್ಮಾ ನಕಾರಂ ದಶಮಿಂದ್ರಿಯಮ್ ।**
**ಮಕಾರಂ ಮನಪಂಚಾನಾಂ ಶಿಕಾರಂ ಪ್ರಾಣನಾಯಕಮ್ ।**
**ವಕಾರಂ ದಶವಾಯೂನಾಂ ಯಕಾರಂ ತ್ರಿಗುಣಂ ಭವೇತ್ ॥**

ಟೀಕು: ಓಂಕಾರವು ಪಂಚಭೂತ ಸ್ವರೂಪವನುಳಂಥಾದ್ದು. ನಕಾರವು ದಶೇಂದ್ರಿಯ ಸ್ವರೂಪವು, ಮಕಾರವು ಮನ, ಬುದ್ಧಿ, ಚಿತ್ತ ಅಹಂಕಾರ ಜೀವ ಈ ಐದರ ಸ್ವರೂಪನುಳ್ಳುದು, ಶಿಕಾರವು ಪ್ರಾಣಕ್ಕೆ ಒಡೆಯನು, ವಕಾರವು ದಶವಾಯುಗಳಿಗೆ ಕರ್ತವೆಂದರಿವುದು, ಯಕಾರವು ತ್ರಿಗುಣಾತ್ಮಕ ಸ್ವರೂಪವೆಂದರಿವುದು. ॥೧೬೪॥

**ಭಕ್ತೋ ಮಹೇಶ್ವರಶ್ಚೈವ ಪ್ರಸಾದಿಪ್ರಾಣಲಿಂಗಿಕಃ ।**
**ಶರಣ್ಯಃ ಶಿವಲಿಂಗೈಕ್ಯಃ ಷಟ್‌ಸ್ಥಲಂ ಚ ಮಮ ಪ್ರಿಯಮ್ ॥**

ಟೀಕು: ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಇಂತೀ ಷಟ್‌ಸ್ಥಲವು ಎನಗೆ ಪ್ರಿಯವಹಂಥಾದ್ದು ಎಂದು ಶಿವನು ಹೇಳಿದನು. ॥೧೬೫॥

**ದೇವ್ಯೋವಾಚಃ**

**ಭಕ್ತೋ ಮಾಹೇಶ್ವರಶ್ಚೈವ ಪ್ರಸಾದಿಪ್ರಾಣಲಿಂಗಿಕಃ ।**
**ಶರಣಃ ಶಿವಲಿಂಗೈಕ್ಯಃ ಷಟ್‌ಸ್ಥಲಂ ಚ ಕಥಂ ಭವೇತ್ ॥**

ಟೀಕು: ಭಕ್ತನು ಮಾಹೇಶ್ವರನು ಪ್ರಸಾದಿಯು ಪ್ರಾಣಲಿಂಗಿಯು ಶರಣನು ಐಕ್ಯನು ಎಂಬೀ ಷಡುಸ್ಥಲಗಳು ಹೇಗೆ ಅಹುತು ಎಂದು ದೇವಿಯರು ಬೆಸಗೊಂಡರು. ॥೧೬೬॥

**ಈಶ್ವರೋವಾಚ:**

**ಸದಾಚಾರಃ ಶಿವೇ ಭಕ್ತಿಃ ಲಿಂಗಜಂಗಮಮೇಕಧೀಃ ।**
**ಲಾಂಛನೇನ ಶರಣ್ಯಂ ಚ ಶ್ರೇಷ್ಠಂ ಭಕ್ತಸ್ಥಲಂ ಸ್ಮೃತಮ್ ॥**

ಟೀಕು: ಸದಾಚಾರದಲ್ಲಿ ನಡೆದ ಶಿವನಲ್ಲಿ ಸದಾ ಭಕ್ತಿಯಿಂದಿರುವ, ಲಿಂಗಜಂಗಮವನು ಒಂದೇ ಎಂಬ ಬುದ್ಧಿಯುಳ್ಳ, ಲಾಂಛನಧಾರಿಗಳ ಕಂಡಡೆ ವಂದಿಸುವ ಇದು ಉತ್ತಮವಹಂಥಾ ಭಕ್ತಸ್ಥಲವೆಂದು ಈಶ್ವರನು ಹೇಳಿದನು. ॥೧೬೭॥

**ಪರಸ್ತ್ರೀಯಾಂ ಪರಾರ್ಥಂ ಚ ವರ್ಜಿತೋ ಭಾವಶುದ್ಧಿಮಾನ್ ।**
**ಲಿಂಗನಿಷ್ಠೋ ನಿಯುಕ್ತಾತ್ಮೋ ಮಾಹೇಶ್ವರಮನುತ್ತಮಮ್ ॥**

ಟೀಕು: ಪರಸ್ತ್ರೀಯನು ಪರದ್ರವ್ಯವ ವರ್ಜಿಸಿ ಶುದ್ಧನಾಗಿ ಲಿಂಗನಿಷ್ಠೆಯುಳ್ಳಾತನು ಮಹೇಶ್ವರಸ್ಥಲವೆಂದು ಶಿವನು ಹೇಳಿದನು. ॥೧೬೮॥

**ಲಿಂಗಾರ್ಪಿತಪ್ರಸಾದಂ ಚ ಸಂಭೋಗೀ ಲಿಂಗಸಂಯುತಃ ।**
**ಅನರ್ಪಿತಂ ವಿಸರ್ಜಂ ಚ ಪ್ರಸಾದೀಸ್ಥಲಮತ್ತಮಮ್ ॥**

ಟೀಕು: ಲಿಂಗಕ್ಕೆ ಸಮರ್ಪಿಸಿದ ಪ್ರಸಾದವನು ಲಿಂಗನೆನಹಿಂದವೆ ಭೋಗಿಸುವುದು, ಅನರ್ಪಿತವ ವಿಸರ್ಜಿಸುವುದು ಪ್ರಸಾದಿಸ್ಥಲವು. ॥೧೬೯॥

**ತಥಾ ಪ್ರಾಣೇ ಗುಣೇ ಲಿಂಗೇ ಲಿಂಗಪ್ರಾಣೆಸಮಾಹಿತಃ ।**
**ಸುಖದುಃಖಭಯಂ ನಾಸ್ತಿ ಪ್ರಾಣಲಿಂಗಿಸ್ಥಲಂ ಭವೇತ್ ॥**

ಟೀಕು: ಪ್ರಾಣಗುಣವಳಿದು ಲಿಂಗದಲ್ಲಿ ನೆನಹು ಸಂಬಂಧಿಸಿ ಸುಖದುಃಖದ ಭಯವು ತನಗಿಲ್ಲದಿದ್ದರೆ ಇದೀಗ ಪ್ರಾಣಲಿಂಗಿಸ್ಥಲವು. ॥೧೭೦॥

**ಪತಿರ್ಲಿಂಗಂ ಸತೀಚಾಹಮಿತಿ ಯುಕ್ತಂ ಸದಾ ತಥಾ ।**
**ಪಂಚೇಂದ್ರಿಯಸುಖಂ ನಾಸ್ತಿ ಶರಣಸ್ಥಲಮುತ್ತಮಮ್ ॥**

ಟೀಕು: ಲಿಂಗವೇ ಪತಿ, ತಾನೇ ಸತಿಯೆಂಬ ಭಾವದಲ್ಲಿ ಆಚರಿಸಿ, ಪಂಚೇಂದ್ರಿಯಂಗಳ ಸುಖವನು ತಾನು ಬಯಸದಿದ್ದರೆ ಅದು ಶರಣಸ್ಥಲವು. ॥೧೭೧॥

**ಷಡೂರ್ಮಯಶ್ಚ ಷಡ್ವರ್ಗಂ ನಾಸ್ತಿ ಚಾಷ್ಟವಿಧಾರ್ಚನಮ್ ।**
**ನಿರ್ಭಾವೇ ಶಿವಲಿಂಗೈಕ್ಯಃ ಶಿಖಿಕರ್ಪೂರ ಯೋಗವತ್ ॥**

ಟೀಕು: ಕ್ಷುತ್, ಪಿಪಾಸೆ, ಶೋಕ, ಮೋಹ, ಜರೆ, ಮರಣ ಎಂಬ ಷಡೂರ್ಮಿಗಳೂ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯವೆಂಬ ಅರಿಷಡ್ವರ್ಗಗಳು ಇಲ್ಲದಿರುವ, ಲಿಂಗಕ್ಕೆಯು ಅಷ್ಟ ವಿಧಾರ್ಚನೆ ಇಲ್ಲದಿರುಹವು. ಭಾವರಹಿತನಾಗಿ ಇರುವುದೀಗ ಐಕ್ಯಸ್ಥಲವು. ಕರ್ಪೂರವು ಅಗ್ನಿಯ ಸಂಯೋಗವನು ಮಾಡಲಾಗಿ ತನ್ನ ರೂಪಳಿದು ಅಗ್ನಿಯೇ ಆಯಿತು. ಈ ಪ್ರಕಾರದಲ್ಲಿ ಲಿಂಗವ ನೆನನೆನದು ಲಿಂಗವೇ ಆದನೆಂಬುದರ್ಥವು. ॥೧೭೨॥

**ದೇವ್ಯೋವಾಚ**

**ಕಿಂ ಮಿಶ್ರಂ ತು ಯಥಾ ಭಕ್ತಃ ಕಿಂ ಮಿಶ್ರಂ ತು ಮಾಹೇಶ್ವರಃ ।**
**ಕಿಂ ಮಿಶ್ರಂ ತು ಪ್ರಸಾದೀ ಚ ಕಿಂ ಮಿಶ್ರಂ ತು ಪ್ರಾಣಲಿಂಗಿಕಃ ॥**
**ಕಿಂ ಮಿಶ್ರಂ ತು ಶರಣ್ಯಶ್ಚ ಕಿಂ ಮಿಶ್ರಂ ಚೈಕ್ಯಮೇವ ಚ ।**
**ಇತ್ಯೇತೇ ಮಿಶ್ರಿತಂ ಭಾವಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಭಕ್ತಂಗೆ ಏನು ಮಿಶ್ರವು, ಮಾಹೇಶ್ವರಂಗೆ ಏನು ಮಿಶ್ರವು, ಪ್ರಸಾದಿಗೆ ಏನು ಮಿಶ್ರವು, ಪ್ರಾಣಲಿಂಗಿಗೆ ಏನು ಮಿಶ್ರವು, ಶರಣಂಗೆ ಏನು ಮಿಶ್ರವು, ಐಕ್ಯಂಗೆ ಏನು ಮಿಶ್ರವು, ಇಂತೀ ಮಿಶ್ರ ಭಾವವನು ಎಲೆ ಪರಮೇಶ್ವರನೇ ಎನಗೆ ಹೇಳು ಎಂದಳು. ॥೧೭೩–೧೭೪॥

**ಈಶ್ವರೋವಾಚ:**

**ಭಕ್ತಮಾಹೇಶ್ವರಶ್ಚೈವ ಪ್ರಸಾದಿಪ್ರಾಣಲಿಂಗಿನಾಮ್ ।**
**ಶರಣಃ ಶಿವಲಿಂಗೈಕ್ಯೋ ಏಕೈಕಂ ಪಂಚಮಾಶ್ರಯಮ್ ॥**

ಟೀಕು: ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಇಂತಿ ಷಡುಸ್ಥಲವು. ಒಂದೊಂದು ಸ್ಥಲವು ಐದನಾಶ್ರಯಿಸಿಹುದು. ॥೧೭೫॥

**ದೇವ್ಯೋವಾಚ:**

**ಭಕ್ತಸ್ಯಾಂಗಂ ಕಿಮಾಖ್ಯಾತಮಂಗಂ ಮಾಹೇಶ್ವರಸ್ಯ ಚ ।**
**ಪ್ರಸಾದಿನಃ ಕಿಮಂಗಂ ಸ್ಯಾದಂಗಂ ತತ್ಪ್ರಾಣಲಿಂಗಿನಃ ॥**
**ಶರಣ್ಯಸ್ಯ ಕಿಮಂಗಂ ಚ ಐಕ್ಯಸ್ಯಾಂಗಂ ಚ ಕಿಂ ಭವೇತ್ ।**
**ಏತೇ ಹ್ಯಂಗಸ್ಥಲಂ ಚೈವ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಭಕ್ತನ ಅಂಗವಾವುದು, ಮಾಹೇಶ್ವರಂಗೆ ಅಂಗವೇನು, ಪ್ರಸಾದಿಗೆ ಅಂಗವಾವುದು, ಪ್ರಾಣಲಿಂಗಿಗೆ ಅಂಗವಾವುದು, ಶರಣಂಗೆ ಅಂಗವಾವುದು, ಐಕ್ಯಂಗೆ ಅಂಗವಾವುದು, ಈ ಅಂಗಸ್ಥಲವನು ಎಲೆ ಪರಮೇಶ್ವರನೆ ಎನಗೆ ಹೇಳು ಎಂದು ಪಾರ್ವತಿಯು ಬೆಸಗೊಂಡಳು. ॥೧೭೬–೧೭೭॥

**ಈಶ್ವರೋವಾಚ:**

**ಭಕ್ತಸ್ಯಾಂಗಸ್ಥಲಂ ಪೃಥ್ವಿ ಜಲಂ ಮಾಹೇಶ್ವರಸ್ಯ ಚ ।**
**ಪ್ರಸಾದಿಸ್ಯಾಂಗಮಗ್ನಿಶ್ಚ ವಾಯ್ವಾಂಗಂ ಪ್ರಾಣಲಿಂಗಿನಃ ॥**
**ಶರಣಾಂಗಂ ಚ ಆಕಾಶಂ ಲಿಂಗೈಕ್ಯಸ್ಯಾತ್ಮಮೇವ ಚ ।**
**ಏವಮಂಗಸ್ಥಲಂ ಜ್ಞಾನಂ ಸುಸೂಕ್ಷ್ಮಂ ಕಮಲಾನನೇ ॥**

ಟೀಕು: ಭಕ್ತನ ಅಂಗಸ್ಥಲವು ಭೂಮಿಯು, ಮಾಹೇಶ್ವರನ ಅಂಗಸ್ಥಲವು ಜಲವು, ಪ್ರಸಾದಿಯ ಅಂಗಸ್ಥಲವು ಅಗ್ನಿಯು, ಪ್ರಾಣಲಿಂಗಿಯ ಅಂಗಸ್ಥಲವು ವಾಯು, ಶರಣನ ಅಂಗಸ್ಥಲವು ಆಕಾಶ, ಐಕ್ಯನ ಅಂಗಸ್ಥಲವು ಆತ್ಮವು. ಈ ಪ್ರಕಾರದಲ್ಲಿ ಅಂಗಸ್ಥಲವು ಅತಿಸೂಕ್ಷ್ಮವು ಕೇಳಾ ಪಾರ್ವತಿ. ॥೧೭೮–೧೭೯॥

**ದೇವ್ಯೋವಾಚ:**

**ಏತೇಷಾಂ ಷಟ್‌ಸ್ಥಲಾನಾಂ ಚ ಹಸ್ತಾನಾಂ ಕೇऽಪಿ ಭವಂತ್ಯಪಿ ।**
**ಹಸ್ತಭೇದಂ ನ ಜಾನಾಮಿ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಈ ಹೇಳಿದ ಅಂಗಸ್ಥಲಂಗಳಿಗೆ ಹಸ್ತಂಗಳು ಅವುವು, ಆ ಹಸ್ತಂಗಳ ಭೇದವನು ಅರಿಯೆನು ಎಲೆ ಶಿವನೆ ಹೇಳು ಎಂದಳು. ॥೧೮೦॥

**ಈಶ್ವರೋವಾಚ:**

**ಭಕ್ತಸ್ಸುಚಿತ್ತ ಹಸ್ತಶ್ಚ ಸುಬುದ್ಧಿಶ್ಚ ಮಾಹೇಶ್ವರಃ ।**
**ಪ್ರಸಾದಿ ನಿರಹಂಕಾರಃ ಸುಮನಃ ಪ್ರಾಣಲಿಂಗಿನಃ ॥**
**ಜ್ಞಾನಹಸ್ತಂ ಶರಣಸ್ಯ ಭಾವಮೈಕ್ಯಸ್ಯ ಏವ ಚ ।**
**ಏತೇ ಹಸ್ತಪರಿಜ್ಞಾನಂ ವಿಶೇಷಂ ಶ್ರುಣು ಪಾರ್ವತಿ ॥**

ಟೀಕು: ಭಕ್ತಂಗೆ ಸುಚಿತ್ತವೆ ಹಸ್ತವು, ಮಾಹೇಶ್ವರಂಗೆ ಸುಬುದ್ಧಿಯೇ ಹಸ್ತವು, ಪ್ರಸಾದಿಗೆ ನಿರಹಂಕಾರವೇ ಹಸ್ತ, ಪ್ರಾಣಲಿಂಗಿಗೆ ಸುಮನವೇ ಹಸ್ತವು. ಶರಣಂಗೆ ಜ್ಞಾನವೇ ಹಸ್ತವು, ಐಕ್ಯಂಗೆ ಭಾವವೇ ಹಸ್ತವು. ಈ ಹಸ್ತಂಗಳ ಭೇದವನರಿವುದು ವಿಶೇಷವು ಕಾಣ ದೇವಿ ಎಂದು ಈಶ್ವರನು ಹೇಳಿದನು. ॥೧೮೧–೧೮೨॥

**ದೇವ್ಯೋವಾಚ:**

**ಸದ್ಭಕ್ತಸ್ಯ ಚ ಲಿಂಗಂ ಕಿಂ ಲಿಂಗಂ ಮಾಹೇಶ್ವರಸ್ಯ ಕಿಮ್ ।**
**ಪ್ರಸಾದಿನಶ್ಚ ಕಿಂ ಲಿಂಗಂ ಕಿಂ ಲಿಂಗಂ ಪ್ರಾಣಲಿಂಗಿನಃ ॥**
**ಕಿಂ ಲಿಂಗಂ ತು ಶರಣ್ಯಂ ಚ ಲಿಂಗಮೈಕ್ಯಸ್ಯ ಕಿಂ ಭವೇತ್ ।**
**ಷಡ್ವಿದಸ್ತಂ ನ ಜಾನಾಮಿ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಭಕ್ತಂಗೆ ಲಿಂಗವಾವುದು, ಮಾಹೇಶ್ವರಂಗೆ ಲಿಂಗವಾವುದು, ಪ್ರಸಾದಿಗೆ ಲಿಂಗವಾವುದು, ಪ್ರಾಣಲಿಂಗಿಗೆ ಲಿಂಗವಾವುದು, ಶರಣಂಗೆ ಲಿಂಗವಾವುದು, ಈ ಷಡ್ವಿಧವನು ಅರಿಯೆನು ಎನಗೆ ತಿಳುಹಿ ಎಂದು ದೇವಿಯು ಬೆಸಗೊಂಡಳು. ॥೧೮೩–೧೮೪॥

**ಈಶ್ವರೋವಾಚ:**

**ಭಕ್ತಸ್ಯಾಚಾರಲಿಂಗಂ ಚ ಗುರುಲಿಂಗಂ ಮಾಹೇಶ್ವರಃ ।**
**ಪ್ರಸಾದಿನಃ ಶಿವೋ ಲಿಂಗಂ ಜಂಗಮಂ ಪ್ರಾಣಲಿಂಗಿನಃ ॥**
**ಪ್ರಸಾದಂ ಚ ಶರಣ್ಯಾನಾಂ ಐಕ್ಯಸ್ಯ ಮಹಮೇವ ಚ ।**
**ಏತತ್ಸೂಕ್ಷ್ಮತರಂ ತಸ್ಮಾದ್ವಿಶೇಷಂ ಶ್ರುಣು ಪಾರ್ವತಿ ॥**

ಟೀಕು: ಭಕ್ತಂಗೆ ಆಚಾರಲಿಂಗವು, ಮಾಹೇಶ್ವರಂಗೆ ಗುರುಲಿಂಗವು, ಪ್ರಸಾದಿಗೆ ಶಿವಲಿಂಗವು, ಪ್ರಾಣಲಿಂಗಿಗೆ ಜಂಗಮಲಿಂಗವು, ಶರಣನಿಗೆ ಪ್ರಸಾದಲಿಂಗವು, ಐಕ್ಯಂಗೆ ಮಹಾಲಿಂಗವು, ಇದು ಅತ್ಯಂತ ಸೂಕ್ಷ್ಮವಾದ ವಿಚಾರವು, ಎಂದು ಈಶ್ವರನು ಹೇಳಿದನು. ॥೧೮೫–೧೮೬॥

**ದೇವ್ಯೋವಾಚ:**

**ಆಚಾರಸ್ಯ ಮುಖಂ ಕಿಂ ವಾ ಗುರುಲಿಂಗಮುಖಂ ಕಥಮ್ ।**
**ಶಿವಲಿಂಗಮುಖಂ ಚೈವ ಚರಲಿಂಗಮುಖಂ ಕಥಮ್ ॥**
**ಪ್ರಸಾದಸ್ಯ ಮುಖಂ ಕಿಂ ವಾ ಜ್ಞಾನಲಿಂಗಮುಖಂ ಕಥಮ್ ।**
**ಏತನ್ಮುಖಂ ನ ಜಾನಾಮಿ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಆಚಾರಲಿಂಗಕ್ಕೆ ಮುಖವಾವುದು, ಗುರುಲಿಂಗಕ್ಕೆ ಮುಖವಾವುದು, ಶಿವಲಿಂಗಕ್ಕೆ ಮುಖವಾವುದು, ಜಂಗಮಲಿಂಗಕ್ಕೆ ಮುಖವಾವುದು, ಪ್ರಸಾದಲಿಂಗಕ್ಕೆ ಮುಖವಾವುದು, ಮಹಾಲಿಂಗಕ್ಕೆ ಮುಖವಾವುದು ಈ ಮುಖಂಗಳನರಿಯೆನು ಎಲೆ ಪರಮೇಶ್ವರನ ತಿಳಿಸು ಎಂದು ಬೆಸಗೊಂಡಳು. ॥೧೮೭–೧೮೮॥

**ಈಶ್ವರೋವಾಚ:**

**ಜ್ಞಾನಲಿಂಗಮುಖಂ ಪಂಚ ಆಚಾರಾದಿಕಮುಚ್ಯತೇ ।**
**ಷಡ್ವಿಧಾನಂ ತು ಲಿಂಗಾನಾಂ ಏತನ್ಮುಖಮಿದಂ ಶ್ರುಣು ॥**

ಟೀಕು: ಆಚಾರಲಿಂಗ ಮೊದಲಾಗಿ ಮಹಾಲಿಂಗವೇ ಕಡೆಯಾಗಿವುಳ್ಳ ಆರು ಲಿಂಗಗಳಿವೊಂದೊಂದಕ್ಕೆ ಐದೈದು ಮುಖವೆಂದು ದೇವಿಯರಿಗೆ ಶಿವನು ಹೇಳಿದನು. ॥೧೮೯॥

**ಗುರುಲಿಂಗಂ ಚರಲಿಂಗಂ ಪ್ರಸಾದಂ ಜ್ಞಾನಮೇವ ಹಿ ।**
**ಏತತ್ ಪಂಚಮುಖಂ ಚೈವ ಸದಾಚಾರಸ್ಯ ಲಕ್ಷಣಮ್ ॥**

ಟೀಕು: ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಈ ಐದು ಲಿಂಗಗಳು ಆಚಾರಲಿಂಗಕ್ಕೆ ಮುಖವೆಂದರಿವುದು. ॥೧೯೦॥

**ಜಂಗಮಲಿಂಗಮಾಚಾರಂ ಜ್ಞಾನಲಿಂಗಂ ಪ್ರಸಾದಕಮ್ ।**
**ಪಂಚವಕ್ತ್ರಸಮಾಯುಕ್ತಮಿತ್ಯೇತೇ ಗುರುಲಕ್ಷಣಮ್ ॥**

ಟೀಕು: ಜಂಗಮಲಿಂಗ ಶಿವಲಿಂಗ ಆಚಾರಲಿಂಗ ಮಹಾಲಿಂಗ ಪ್ರಸಾದಲಿಂಗ ಈ ಐದೂ ಲಿಂಗಗಳು ಗುರುಲಿಂಗಕ್ಕೆ ಮುಖವೆಂದರಿವುದು. ॥೧೯೧॥

**ಪ್ರಸಾದಂ ಜಂಗಮಂ ಚೈವ ಆಚಾರಂ ಜ್ಞಾನಮೇವ ಚ ।**
**ಗುರುಪಂಚಮುಖಂ ಚೈವ ಇತ್ಯೇತತ್ ಲಿಂಗಲಕ್ಷಣಮ್ ॥**

ಟೀಕು: ಪ್ರಸಾದಲಿಂಗ ಜಂಗಮಲಿಂಗ ಆಚಾರಲಿಂಗ ಮಹಾಲಿಂಗ ಗುರುಲಿಂಗ ಈ ಐದೂ ಲಿಂಗಗಳು ಶಿವಲಿಂಗಕ್ಕೆ ಮುಖವೆಂದರಿವುದು. ॥೧೯೨॥

**ಆಚಾರಂ ಜ್ಞಾನಮಾಶ್ರಿತ್ಯ ಗುರುಲಿಂಗಂ ಪ್ರಸಾದಕಮ್ ।**
**ಏತತ್ ಪಂಚಮುಖಂ ಚೈವ ಏತಜ್ಜಂಗಮಲಕ್ಷಣಮ್ ॥**

ಟೀಕು: ಆಚಾರಲಿಂಗ ಮಹಾಲಿಂಗ ಗುರುಲಿಂಗ ಶಿವಲಿಂಗ, ಪ್ರಸಾದಲಿಂಗ ಈ ಐದೂ ಲಿಂಗಗಳು ಜಂಗಮಲಿಂಗಕ್ಕೆ ಮುಖವೆಂದರಿವುದು. ॥೧೯೩॥

**ಜ್ಞಾನಾಚಾರಂ ಗುರುಲಿಂಗಂ ಜಂಗಮಂ ಚ ತಥೈವ ಚ ।**
**ಏತೇ ಪಂಚಸಮಾಯುಕ್ತಂ ಪ್ರಸಾದಲಿಂಗಲಕ್ಷಣಮ್ ॥**

ಟೀಕು: ಮಹಾಲಿಂಗ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಈ ಐದೂ ಲಿಂಗಗಳು ಪ್ರಸಾದಲಿಂಗಕ್ಕೆ ಮುಖವೆಂದರಿವುದು. ॥೧೯೪॥

**ಜಂಗಮಂ ಶಿವಮಾಚಾರಂ ಗುರುಲಿಂಗಪ್ರಸಾದಕಮ್ ।**
**ಏತತ್ ಪಂಚಮುಖಂ ಚೈವ ಮಹಾಲಿಂಗಸ್ಯ ಲಕ್ಷಣಮ್ ॥**

ಟೀಕು: ಜಂಗಮಲಿಂಗ, ಶಿವಲಿಂಗ, ಆಚಾರಲಿಂಗ, ಗುರುಲಿಂಗ, ಪ್ರಸಾದಲಿಂಗ ಈ ಐದೂ ಲಿಂಗಗಳು ಮಹಾಲಿಂಗಕ್ಕೆ ಮುಖವೆಂದರಿವುದು ಎಂದು ಶಿವನು ದೇವಿಯರಿಗೆ ನಿರೂಪನ ಕೊಟ್ಟನು. ॥೧೯೫॥

**ದೇವ್ಯೋವ್ಯಾಚ:**

**ಪಂಚಭೂತಮಯಂ ದೇಹಂ ಕಿಂ ಭೇದಂ ತು ಸಮರ್ಪಿತಮ್ ।**
**ಅರ್ಪಿತಸ್ಯ ಮುಖಂ ಕಿಂ ವಾ ತನ್ಮುಖಂ ಕಥಯಸ್ವ ಮೇ ॥**

ಟೀಕು: ಪಂಚಭೂತಾತ್ಮಕವಹಂಥಾದು ಈ ದೇಹವು. ಇದನ್ನು ಸಮರ್ಪಿಸುವ ಭೇದವಾವುದು, ಅರ್ಪಿತಮುಖವಾವುದು. ಎನಗೆ ಕರುಣಿಸು ಎಂದು ದೇವಿಯು ಹೇಳಿದಳು. ॥೧೯೬॥

**ಈಶ್ವರೋವಾಚ**

**ಆಚಾರಸ್ಯಾರ್ಪಿತಂ ಪೃಥ್ವಿ ಗುರುಲಿಂಗಾರ್ಪಿತಂ ಪಯಃ ।**
**ಶಿವಲಿಂಗಾರ್ಪಿತಂ ತೇಜೋ ವಾಯುಶ್ಚರಸಮರ್ಪಿತಮ್ ॥**
**ಪ್ರಸಾದಾರ್ಪಿತಮಾಕಾಶಂ ಪರಿಣಾಮಾರ್ಪಿತಂ ಮಹತ್ ।**
**ಏವಂ ಪಂಚಮುಖಂ ಜ್ಞಾನಂ ದುರ್ಲಭಂ ಶ್ರುಣು ಪಾರ್ವತಿ ॥**

ಟೀಕು: ಆಚಾರಲಿಂಗಕ್ಕೆ ಪೃಥ್ವಿ ಸಮರ್ಪಣವು, ಗುರುಲಿಂಗಕ್ಕೆ ಅಪ್ಪುವು ಸಮರ್ಪಣವು, ಶಿವಲಿಂಗಕ್ಕೆ ತೇಜಸ್ಸು ಸಮರ್ಪಣವು, ಜಂಗಮಲಿಂಗಕ್ಕೆ ವಾಯು ಸಮರ್ಪಣವು, ಪ್ರಸಾದಲಿಂಗಕ್ಕೆ ಆಕಾಶ ಸಮರ್ಪಣವು, ಮಹಾಲಿಂಗಕ್ಕೆ ಪರಿಣಾಮವು ಸಮರ್ಪಣವು, ಈ ಪ್ರಕಾರದಲ್ಲಿ ಐದು ಮುಖದಲ್ಲಿ ಸಮರ್ಪಣವ ಮಾಡೂದು, ಇದನರಿವುದು ದುರ್ಲಭವೆಂದು ಈಶ್ವರನು ಹೇಳಿದನು. ॥೧೯೭–೧೯೮॥

**ಪಂಚವಿಷಯಾದಿಕಂ ಭೋಗಂ ಪಂಚಾಕ್ಷರಸಮನ್ವಿತಮ್ ।**
**ಪಂಚೇಂದ್ರಿಯಸಮಾಯುಕ್ತಂ ಪಂಚವಕ್ತ್ರಶ್ಚ ಸಂಯುತಮ್ ॥**
**ಪಂಚಭೂತಾತ್ಮಕಂ ದೇಹಂ ಪಂಚವಕ್ತ್ರಸ್ರಮರ್ಪಿತಮ್ ।**
**ಪಂಚಾದಿಕಮಭಾವೇನ ದುರ್ಲಭಂ ಮುಕ್ತಿತತ್ವದಮ್ ॥**
**ಶಬ್ದಸ್ಪರ್ಶಶ್ಚ ರೂಪಶ್ಚ ರಸಗಂಧಂ ಚ ಪಂಚಮಮ್ ।**
**ಏವಂ ಪಂಚಾದಿಕಂ ಚೈವ ಪಂಚವಕ್ತ್ರೇ ಸಮರ್ಪಿತಮ್ ॥**

ಟೀಕು: ಈ ಐದು ಇಂದ್ರಿಯಗಳಲ್ಲಿ ಐದು ಪ್ರಕಾರಂಗಳಹ ವಿಷಯಂಗಳಲ್ಲಿ ಭೋಗವನು ಪಂಚಾಕ್ಷರ ಸ್ಮರಣೆಯಿಂದವ ಐದು ಮುಖಂಗಳಲ್ಲಿ ಸಮರ್ಪಣವಂ ಮಾಡೂದು. ಪಂಚಭೂತಮಯವಹಂಥಾ ದೇಹವನು ಐದು ಮುಖಂಗಳಲ್ಲಿ ಸಮರ್ಪಣವಂ ಮಾಡೂದು. ಹೀಗೆ ಸಮರ್ಪಣಮಂ ಮಾಡಲಾಗಿ ಮುಕ್ತಿಯಹುದು ಅರಿದೆಲ್ಲ, ಶಬ್ದ ಸ್ಪರ್ಶ ರೂಪು ರಸ ಗಂಧ ಈ ಐದು ವಿಷಯ ಸುಖಂಗಳನು ಪಂಚಮುಖದಲ್ಲಿ

ಸಮರ್ಪಣಮಂ ಮಾಡಲಾಗಿ ಮುಕ್ತಿಯಹುದು. ಇದಕ್ಕೆ ಆಶ್ಚರ್ಯವಿಲ್ಲವೆಂದು ಈಶ್ವರನು ಹೇಳಿದನು. ॥೧೯೯–೨೦೦–೨೦೧॥

**ದೇವ್ಯೋವಾಚ:**

**ಕಸ್ಮಿನ್ ಲಿಂಗಾರ್ಪಿತಂ ರೂಪಂ ಕಸ್ಮಿನ್ ಲಿಂಗಾರ್ಪಿತಂ ರಸಃ ।**
**ಕಸ್ಮಿನ್ ಲಿಂಗಾರ್ಪಿತಂ ಗಂಧಃ ಶಬ್ದಂ ಕಸ್ಮಿನ್ ಸಮರ್ಪಿತಃ ।**
**ಸ್ಪರ್ಶಃ ಸಮರ್ಪಿತಃ ಕಸ್ಮಿನ್ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಆವ ಲಿಂಗದಲ್ಲಿ ರೂಪು ಸಮರ್ಪಣವು, ಆವ ಲಿಂಗದಲ್ಲಿ ರಸ ಸಮರ್ಪಣವು, ಆವ ಲಿಂಗದಲ್ಲಿ ಗಂಧವು ಸಮರ್ಪಣವು, ಆವ ಲಿಂಗದಲ್ಲಿ ಸ್ಪರ್ಶವು ಸಮರ್ಪಣ. ಆವ ಲಿಂಗದಲ್ಲಿ ಶಬ್ದವು ಸಮರ್ಪಣವು. ಈ ಭೇದವನು ಎಲೆ ಪರಮೇಶ್ವರನೆ ಹೇಳು ಎಂದಳು. ॥೨೦೨॥

**ಈಶ್ವರೋವಾಚ:**

**ಶಿವಲಿಂಗಾರ್ಪಿತಂ ರೂಪಂ ಸ್ಪರ್ಶಂ ಚ ಚರಲಿಂಗಕಮ್ ।**
**ಗಂಧಮಾಚಾರಲಿಂಗಂ ಚ ಗುರುಲಿಂಗಂ ತಥಾ ರಸಮ್ ॥**
**ಶಬ್ದಂ ಪ್ರಸಾದಲಿಂಗಂ ಚ ಅರ್ಪಿತಂ ಚ ಪೃಥಕ್ ಪೃಥಕ್ ।**
**ಏವಂ ಲಿಂಗಾರ್ಪಿತಂ ಜ್ಞಾತ್ವಾ ತತ್ಪ್ರಸಾದ ಭವೇತ್ತತಃ ॥**

ಟೀಕು: ರೂಪು ಶಿವಲಿಂಗಾರ್ಪಿತವು, ಸ್ಪರ್ಶನವು ಜಂಗಮಲಿಂಗಾರ್ಪಿತವು, ಗಂಧವು ಆಚಾರಲಿಂಗಾರ್ಪಿತವು, ರಸವು ಗುರುಲಿಂಗಾರ್ಪಿತವು, ಶಬ್ದವು ಪ್ರಸಾದಲಿಂಗಾರ್ಪಿತವು. ಹೀಗೆ ಬೇರೆ ಬೇರೆ ಸಮರ್ಪಣವಂ ಮಾಡೂದು. ಈ ಪ್ರಕಾರದಲ್ಲಿ ಲಿಂಗಾರ್ಪಿತವನರಿದಾತನು ಪ್ರಸಾದಿಯಹನು. ॥೨೦೩–೨೦೪॥

**ಶ್ರುತಂ ಪ್ರಸಾದಲಿಂಗೇ ಚ ಸ್ಪರ್ಶಂ ಚ ಚರಲಿಂಗಕೇ ।**
**ಶಿವಲಿಂಗಾರ್ಪಿತಂ ರೂಪಂ ಗುರುಲಿಂಗಾರ್ಪಿತೋ ರಸಃ ॥**
**ಘ್ರಾಣಮಾಚಾರಲಿಂಗಸ್ಯ ಪರಿಣಾಮಂ ಮಹಾಸ್ಥಲೇ ।**
**ಏತನ್ಮುಖಪರಿಜ್ಞಾನಂ ದುರ್ಲಭಂ ಶ್ರುಣು ಪಾರ್ವತಿ ॥**

ಟೀಕು: ಪ್ರಸಾದಲಿಂಗದಲ್ಲಿ ಶಬ್ದವರ್ಪಿತವು, ಜಂಗಮಲಿಂಗದಲ್ಲಿ ಸ್ಪರ್ಶವರ್ಪಿತವು, ಶಿವಲಿಂಗದಲ್ಲಿ ರೂಪವರ್ಪಿತವು, ರಸವು ಗುರುಲಿಂಗಾರ್ಪಿತವು. ಗಂಧವು ಆಚಾರಲಿಂಗಾರ್ಪಿತವು, ಪರಿಣಾಮವು ಮಹಾಲಿಂಗಾರ್ಪಿತವು. ಈ ಪ್ರಕಾರದಲ್ಲಿ ಅರ್ಪಿತ ಮುಖವನರಿವುದು ದುರ್ಲಭವು ಕೇಳಾ ದೇವಿ ಎಂದು ಈಶ್ವರನು ಹೇಳಿದನು. ॥೨೦೫–೨೦೬॥

**ಯಥೇಂದ್ರಿಯಮುಖಾದ್ದೇಯಂ ತದಿಂದ್ರಿಯಮುಖೇವ ಚ ।**
**ಅನ್ಯೇಂದ್ರಿಯೋಪಭೋಕ್ತವ್ಯಮನರ್ಹಂ ಭೂಷಣಾದಿವತ್ ॥**

ಟೀಕು: ಆವ ಇಂದ್ರಿಯದ ಮುಖದ ದೆಸೆಯಿಂದ ಕೊಡಲು ಯೋಗ್ಯವಹಂಥಾದು, ಆ ಇಂದ್ರಿಯ ಮುಖದಿಂದವೆ ಕೊಡಲು ಯೋಗ್ಯವು. ಅದಲ್ಲದೆ ಮತ್ತೊಂದು ಇಂದ್ರಿಯದ ಮುಖದಿಂದ ಕೊಡಲು ಯೋಗ್ಯವಲ್ಲ. ಅದು ಹೇಗೆಂದಡೆ: ಭೂಷಣಂಗಳೋಪಾದಿಯೆಂದರಿವುದು. ಭೂಷಣಂಗಳು ತತ್ತಸ್ಥಾನದಲ್ಲಿ ಯೋಗ್ಯವಹವು. ಒಂದು ಸ್ಥಾನದಲ್ಲಿಯ ಆಭರಣವು ಮತ್ತೊಂದು ಸ್ಥಾನಕ್ಕೆ ಯೋಗ್ಯವಲ್ಲ. ಈ ಮರ್ಯಾದೆಯಲ್ಲಿ ಇಂದ್ರಿಯಂಗಳ ಸಮರ್ಪಣವೆಂದರಿವುದು. ॥೨೦೭॥

**ಇಂದ್ರಿಯಾದಾಗತಂ ಕಿಂಚಿದ್ಯತ್ಸುಖಂ ತತ್‌ಶಿವಾರ್ಪಣಮ್ ।**
**ತತ್ಪ್ರಸಾದಂ ಚ ಭೋಕ್ತವ್ಯಂ ತದಿಂದ್ರಿಯಮುಖೇನ ಚ ॥**

ಟೀಕು: ಇಂದ್ರಿಯದ ದೆಸೆಯಿಂದ ಬಂದಂಥಾ ಒಂದಿನಿತು ಸುಖವುಂಟಲಾ ಈ ಸುಖವನು ಶಿವಾರ್ಪಣವಂ ಮಾಡೂದು. ಆ ಇಂದ್ರಿಯದ ಮುಖದಿಂದವೆ ಆ ಪ್ರಸಾದವನು ಸ್ವೀಕಾರವಂ ಮಾಡೂದು, ಅದಂ ಪ್ರಸಾದ ಭೋಗವೆಂದರಿವುದು. ॥೨೦೮॥

**ದೇವ್ಯೋವಾಚ:**

**ಕಿಂ ಮಿಶ್ರಂ ತು ಯಥಾರೂಪಂ ಕಿಂ ಮಿಶ್ರಂ ತು ಯಥಾ ರಸಮ್ ।**
**ಕಿಂ ಮಿಶ್ರಂ ತು ಯಥಾಗಂಧ ಕಿಂ ಮಿಶ್ರಂ ಶಬ್ದಮೇವ ಚ ॥**
**ಕಿಂ ಮಿಶ್ರಂ ಸ್ಪರ್ಶನಂ ಚೈವ ಬ್ರೂಹಿ ಮೇ ಪರಮೇಶ್ವರ ।**
**ಇತಿ ಭೇದಂ ನ ಜಾನಾಮಿ ಏಕದಾಖ್ಯಾ ಹಿ ತತ್ತ್ವತಃ ॥**

ಟೀಕು: ರೂಪವು ಏನು ಮಿಶ್ರವಾಗಿದೆ, ರಸವು ಏನು ಮಿಶ್ರವಾಗಿದೆ. ಗಂಧವಾವಮಿಶ್ರ, ಶಬ್ದವೇನು ಮಿಶ್ರವು, ಸ್ಪರ್ಶನವೇನು ಮಿಶ್ರವು, ಎಲೆ ಪರಮೇಶ್ವರನೆ ಇದನು ನಾನರಿಯೆನು, ತಾತ್ಪರ್ಯವಾಗಿ ನಿರೂಪಿಸು ಎಂದಳು. ॥೨೦೯–೨೧೦॥

**ಈಶ್ವರೋವಾಚ:**

**ಶಬ್ದೇ ಪಂಚಮಸಮಾಯುಕ್ತಂ ಸ್ಪರ್ಶೇ ಪಂಚಸಮನ್ವಿತಮ್ ।**
**ರೂಪೇ ಪಂಚಸಮಾಖ್ಯಾತಂ ರಸೇ ಪಂಚಸಮನ್ವಿತಮ್ ॥**
**ಗಂಧೇ ಪಂಚಸಮಾಯುಕ್ತಂ ಇತ್ಯೇತೇ ಮಿಶ್ರಿತಂ ಶ್ರುಣು ।**
**ಯಥಾದ್ರವ್ಯಮುಖಂ ಜ್ಞಾತ್ವಾ ಅರ್ಪಿತಂ ಚ ಸುದುರ್ಲಭಮ್ ॥**

ಟೀಕು: ಶಬ್ದದಲ್ಲಿ ಐದೂ ಕೂಡಿ ಇಹುದು, ಸ್ಪರ್ಶದಲ್ಲಿ ಐದೂ ಕೂಡಿ ಇಹುದು. ರೂಪದಲ್ಲಿ ಐದೂ ಕೂಡಿ ಇಹುದು, ರಸದಲ್ಲಿ ಐದೂ ಕೂಡಿ ಇಹುದು, ಗಂಧದಲ್ಲಿ

ಐದೂ ಕೂಡಿ ಇಹುದು, ಇವು ಮಿಶ್ರವು, ದ್ರವ್ಯಮುಖವನರಿದು ಅರ್ಪಿಸೂದು ದುರ್ಲಭವು ಕೇಳಾ ಪಾರ್ವತಿ ಎಂದು ಈಶ್ವರನು ಹೇಳಿದನು. ॥೨೧೧-೨೧೨॥

**ದೇವ್ಯೋವಾಚ:**

**ಪಂಚೇಂದ್ರಿಯಾರ್ಪಿತಂ ಲಿಂಗಂ ಪಂಚೇಂದ್ರಿಯಪ್ರಸಾದಿನಾಮ್ ।**
**ಇತಿ ಭೇದಂ ನ ಜಾನಾಮಿ ಏತದಾಖ್ಯಾ ಹಿ ತತ್ತ್ವತಃ ॥**

ಟೀಕು: ಪಂಚೇಂದ್ರಿಯ ಸಮರ್ಪಣವಾದಂಥಾ ಲಿಂಗದ ಭೇದವನು ಪಂಚೇಂದ್ರಿಯ ಸಮರ್ಪಣವ ಮಾಡಿ ಭೋಗಿಸುವ ಪ್ರಸಾದಿಗಳ ಭೇದವನು ನಾನು ಅರಿಯೆನು, ಕೃಪೆಯಿಂದ ಹೇಳಾ ಎಂದು ದೇವಿಯು ಬೆಸಗೊಂಡಳು. ॥೨೧೩॥

**ಈಶ್ವರೋವಾಚ:**

**ಶ್ರೋತ್ರೇಂದ್ರಿಯಸಮಾಯುಕ್ತಂ ಪ್ರಸಾದಂ ಲಿಂಗಮೇವ ಚ ।**
**ತ್ವಗಿಂದ್ರಯಮುಖಂ ಜ್ಞೇಯಂ ಜಂಗಮಂ ಚ ತಥೈವ ಚ ॥**
**ನಯನೇಂದ್ರಿಯಸಮುತ್ಪನ್ನಂ ಶಿವಲಿಂಗಂ ತಥೈವ ಚ ।**
**ಜಿಹ್ವೇಂದ್ರಿಯಮುಖಂ ಜ್ಞೇಯಂ ಗುರುಲಿಂಗಂ ತಥೈವ ಚ ॥**
**ಘ್ರಾಣೇಂದ್ರಿಯಸಮಾಯುಕ್ತಮಾಚಾರಂ ಚ ತಥೈವ ಚ ।**
**ಹೃದಿಂದ್ರಿಯಮುಖಂ ಚೈವ ಮಹಾಲಿಂಗಂ ತಥೈವ ಚ ॥**

ಟೀಕು: ಪ್ರಸಾದಲಿಂಗವು ಶ್ರೋತ್ರೇಂದ್ರಿಯವ ಕೂಡಿಹುದು, ಜಂಗಮಲಿಂಗವು ಸ್ಪರ್ಶನೇಂದ್ರಿಯವ ಕೂಡಿಹುದು. ಶಿವಲಿಂಗವು ನಯನೇಂದ್ರಿಯವ ಕೂಡಿಹುದು, ಗುರುಲಿಂಗವು ಜಿಹ್ವೇಂದ್ರಿಯವ ಬೆರೆಸಿಹುದು, ಆಚಾರಲಿಂಗವು ನಾಸಿಕೇಂದ್ರಿಯವ ಸೋಂಕಿಹುದು, ಮಹಾಲಿಂಗವು ಮನಸಿಂದ್ರಿಯವ ಕೂಡಿಹುದು. ॥೨೧೪-೨೦೧೫-೨೦೧೬॥

**ಹೃದಿಂದ್ರಿಯಮುಖಂ ಜ್ಞಾತ್ವಾ ಐಕ್ಯ ಏವ ಪ್ರಸಾದಿ ಚ ।**
**ಶ್ರೋತ್ರೇಂದ್ರಿಯಮುಖಂ ಜ್ಞಾತ್ವಾ ಶರಣಸ್ಥಲ ಪ್ರಸಾದಿ ಚ ॥**
**ತ್ವಗಿಂದ್ರಿಯಮುಖಂ ಜ್ಞಾತ್ವಾ ಪ್ರಾಣಲಿಂಗಿ ಪ್ರಸಾದಿ ಚ ।**
**ನಯನೇಂದ್ರಿಯಮುಖಂ ಜ್ಞಾತ್ವಾ ತತ್ಪ್ರಸಾದಿ ಪ್ರಸಾದಿ ಚ ॥**
**ಜಿಹ್ವೇಂದ್ರಿಯ ಮುಖಂ ಜ್ಞಾತ್ವಾ ತತ್ಪ್ರಸಾದಿ ಮಹೇಶ್ವರಃ ।**
**ಘ್ರಾಣೇಂದ್ರಿಯಮುಖಂ ಜ್ಞಾತ್ವಾ ಭಕ್ತಸ್ಯಾಪಿ ಪ್ರಸಾದವಾನ್ ॥**

ಟೀಕು: ಮನಸ್ಸೆಂಬ ಇಂದ್ರಿಯದ ಮುಖವನರಿದಂಥಾ ಪ್ರಸಾದಿ ಐಕ್ಯನು ಶ್ರೋತ್ರೇಂದ್ರಿಯದ ಮುಖವನರಿದಂಥಾ ಪ್ರಸಾದವಾನ್ ಶರಣನು, ತ್ವಗೇಂದ್ರಿಯದ ಮುಖವರಿದಂಥಾ ಪ್ರಸಾದವಾನ್ ಪ್ರಾಣಲಿಂಗಿಯು, ನಯನೇಂದ್ರಿಯದ

ಮುಖವನರಿದಂಥಾ ಪ್ರಸಾದವಾನ್ ಪ್ರಸಾದಿಯು, ಜಿಹ್ವೇಂದ್ರಿಯದ ಮುಖವನರಿದಂಥಾ ಪ್ರಸಾದಿಯು ಮಾಹೇಶ್ವರನು. ನಾಸಿಕೇಂದ್ರಿಯದ ಮುಖವನರಿದಂಥಾ ಪ್ರಸಾದವಾನ್ ಭಕ್ತನು. ॥೨೧೭-೨೧೮-೨೧೯॥

**ಚಿತ್ತಹಸ್ತೇನ ಭೂಮ್ಯಾಂಗೋ ಭಕ್ತಶ್ಚಾಚಾರಲಿಂಗಕೇ ।**
**ಘ್ರಾಣೇ ಚ ತನ್ಮುಖಂ ಗಂಧೋ ಅರ್ಪಿತಂ ತೃಪ್ತಿಭೋಕ್ತವಾನ್ ॥**

ಟೀಕು: ಭೂಮಿಯೇ ಅಂಗವಾದಂಥಾ ಭಕ್ತನು ಚಿತ್ತವೆಂಬ ಹಸ್ತದಿಂದ ಆಚಾರಲಿಂಗಕ್ಕೆ ನಾಸಿಕೇಂದ್ರಿಯವೆಂಬ ಮುಖದಲ್ಲಿ ಗಂದವನರ್ಪಣವಂ ಮಾಡಿ ತುಷ್ಟಿಯನೆಯ್ದೆ ಭಾವಿಸುವನು. ॥೨೨೦॥

**ಮಾಹೇಶ್ವರೋ ಜಲಾಂಗಶ್ಚ ಬುದ್ಧಿಹಸ್ತೇನ ಸದ್ಗುರೋಃ ।**
**ಜಿಹ್ವಾಮುಖೇ ರಸಂ ಭೇದಾಮರ್ಪಿತಂ ತೃಪ್ತಿಭೋಕ್ತವಾನ್ ॥**

ಟೀಕು: ಜಲವೇ ಅಂಗವಾದ ಮಾಹೇಶ್ವರನು ಬುದ್ಧಿಯೆಂಬ ಹಸ್ತದಿಂದ ಗುರುಲಿಂಗದಲ್ಲಿ ರಸವನು ಜಿಹ್ವೆಯೆಂಬ ಮುಖದಲ್ಲಿ ಸಮರ್ಪಣವ ಮಾಡಿ ತೃಪ್ತಿಯನೆಯ್ದೆ ಭೋಗಿಸುವನು. ॥೨೨೧॥

**ನಿರಹಂಕಾರಹಸ್ತೇನ ಅನಲಾಂಗಃ ಪ್ರಸಾದಿ ಚ ।**
**ಶಿವಲಿಂಗಮುಖೇ ನೇತ್ರೇ ಅರ್ಪಿತಂ ತೃಪ್ತಿಭೋಕ್ತವಾನ್ ॥**

ಟೀಕು: ಅಗ್ನಿಯೇ ಅಂಗವಾದ ಪ್ರಸಾದಿ ನಿರಹಂಕಾರವೆಂಬ ಹಸ್ತದಿಂದ ಶಿವಲಿಂಗಕ್ಕೆ ನೇತ್ರವೆಂಬ ಮುಖದಲ್ಲಿ ರೂಪವನರ್ಪಿಸಿ ರೂಪನೇ ಭೋಗಿಸುವನು. ॥೨೨೨॥

**ಮನೋಹಸ್ತೇನ ವಾಯ್ವಾಂಗಃ ಪ್ರಾಣಲಿಂಗಿ ತಥೈವ ಚ ।**
**ಜಂಗಮಂ ತ್ವಙ್ಮುಖೇ ಚೈವ ಅರ್ಪಿತಂ ಸ್ಪರ್ಶಭೋಕ್ತವಾನ್ ॥**

ಟೀಕು: ವಾಯುವೇ ಅಂಗವಾದ ಪ್ರಾಣಲಿಂಗಿಯು ಮನವೆಂಬ ಹಸ್ತದಿಂದ ಜಂಗಮಲಿಂಗಕ್ಕೆ ತ್ವಕ್ಕೆಂಬ ಮುಖದಲ್ಲಿ ಸ್ಪರ್ಶನಮಂ ಸಮರ್ಪಣಮಂ ಮಾಡಿ ಸ್ಪರ್ಶನವ ಭೋಗಿಸುವನು. ॥೨೨೩॥

**ಜ್ಞಾನಹಸ್ತೇನ ಶರಣೋ ವ್ಯೋಮಾಂಗಶ್ಚ ಪ್ರಸಾದಕೇ ।**
**ಶ್ರೋತ್ರೇ ಚ ತನ್ಮುಖೇ ಚೈವ ಅರ್ಪಿತಂ ಶಬ್ದಭೋಕ್ತವಾನ್ ॥**

ಟೀಕು: ಆಕಾಸವೇ ಅಂಗವಾದ ಶರಣನು ಜ್ಞಾನವೆಂಬ ಹಸ್ತದಿಂದ ಪ್ರಸಾದಲಿಂಗಕ್ಕೆ ಶ್ರೋತ್ರವೆಂಬ ಮುಖದಲ್ಲಿ ಶಬ್ದವನು ಸಮರ್ಪಣವ ಮಾಡಿ ಶಬ್ದಭೋಕ್ತೃವಹನು. ॥೨೨೪॥

**ಆತ್ಮಾಂಗೋ ಭಾವಹಸ್ತೇನ ಐಕ್ಯಶ್ಚಾಪಿ ಮಹಾತ್ಮಕೇ ।**
**ಹೃನ್ಮುಖಾರ್ಪಿತಂ ಪರಿಣಾಮಪದಾರ್ಥಂ ತೃಪ್ತಿಭೋಕ್ತವಾನ್ ॥**

ಟೀಕು: ಆತ್ಮನೇ ಅಂಗವಾದ ಐಕ್ಯನು ಭಾವವೆಂಬ ಹಸ್ತದಿಂದ ಮಹಾಲಿಂಗಕ್ಕೆ ಮನವೆಂಬ ಮುಖದಲ್ಲಿ ಪರಿಣಾಮವನೆ ಅರ್ಪಿತವಂ ಮಾಡಿ ತೃಪ್ತಿಯನೆ ಭೋಗಿಸುವನು. ॥೨೨೫॥

**ದೇವ್ಯೋವಾಚ:**

**ಕಥಮುತ್ಪದ್ಯತೇ ಭಾವಂ ಕಥಂ ಜ್ಞಾನಂ ಸಮುದ್ಭವಮ್ ।**
**ಕಥಂ ಮನಸ್ಸಾಮುತ್ಪನ್ನಂ ಕಥಮಹಂ ಸಮುದ್ಭವಮ್ ॥**
**ಕಥಂ ಬುದ್ಧಿಸಮುತ್ಪನ್ನಂ ಕಥಂ ಚಿತ್ತಂ ಸಮುದ್ಭವಮ್ ।**
**ಇತ್ಯೇವಂ ಷಡ್ವಿಧಂ ಹಸ್ತಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಭಾವವು ಹೇಗೆ ಹುಟ್ಟಿತ್ತು, ಜ್ಞಾನವು ಹೇಗೆ ಹುಟ್ಟಿತ್ತು, ಮನಸ್ಸು ಹೇಗೆ ಹುಟ್ಟಿತ್ತು, ಅಹಂಕಾರವು ಹೇಗೆ ಹುಟ್ಟಿತ್ತು, ಬುದ್ಧಿಯು ಹೇಗೆ ಹುಟ್ಟಿತ್ತು, ಚಿತ್ತವು ಹೇಗೆ ಆಯಿತು ಈ ಪ್ರಕಾರದಲ್ಲಿ ಷಡ್ವಿಧ ಹಸ್ತವನು ಎಲೆ ಪರಮೇಶ್ವರನೆ ಹೇಳು ಎಂದಳು. ॥೨೨೬–೨೨೭॥

**ಈಶ್ವರೋವಾಚ:**

**ವಸ್ತುನೋ ಭಾವಮುತ್ಪನ್ನಂ ಭಾವಾತ್ ಜ್ಞಾನಂ ಸಮುದ್ಭವಮ್ ।**
**ಜ್ಞಾನಶ್ಚ ಮನ ಉತ್ಪನ್ನಂ ಮನಸೋಽಹಂಕೃತಿಸ್ತಥಾ ॥**
**ಅಹಂಕಾರಸ್ತಥೋ ಬುದ್ಧಿಃ ಬುದ್ಧಿಶ್ಚಿತ್ತಸಮುದ್ಭವಮ್ ।**
**ಏಕೈಕಂ ತು ಸಮುತ್ಪನ್ನಂ ಸೂಕ್ಷ್ಮಾತ್ ಸೂಕ್ಷ್ಮಂ ವರಾನನೇ ॥**

ಟೀಕು: ವಸ್ತುವೆಂದರೆ ಪರಬ್ರಹ್ಮದ ನಾಮ, ವಸ್ತುವೆಂಬ ಭಾವ (ಮೊದಲು) ಹುಟ್ಟಿತ್ತು. ಭಾವದಿಂದ ಜ್ಞಾನ ಹುಟ್ಟಿತ್ತು, ಜ್ಞಾನದಿಂದ ಮನಸ್ಸು ಹುಟ್ಟಿತ್ತು, ಮನಸ್ಸಿನಿಂದ ಅಹಂಕಾರ ಹುಟ್ಟಿತ್ತು, ಅಹಂಕಾರದಿಂದ ಬುದ್ಧಿ ಹುಟ್ಟಿತ್ತು, ಬುದ್ಧಿಯಿಂದ ಚಿತ್ತ ಹುಟ್ಟಿತ್ತು, ಈ ಪ್ರಕಾರದಲ್ಲಿ ಒಂದೊಂದರಿಂದ ಒಂದೊಂದು ಹುಟ್ಟಿದವು ಎಂದು ಅರಿವುದು. (ಈ ವಿಚಾರವು, ಅತಿ ಸೂಕ್ಷ್ಮವಾದುದು ಕೇಳಾ ಪಾರ್ವತಿ ಎಂದು ಈಶ್ವರನು ಹೇಳಿದನು. ॥೨೨೮–೨೨೯॥

**ದೇವ್ಯೋವಾಚ:**

**ಚಿತ್ತಂ ಕಿಂ ಲಿಂಗಧಾರಿ ಚ ಬುದ್ಧಿಃ ಕಿಂ ಲಿಂಗಧಾರಿ ಚ ।**
**ಅಹಂಕಾರಸ್ಯ ಕಿಂ ಲಿಂಗಂ ಕಿಂ ಲಿಂಗಂ ಚ ಮನಸ್ತಥಾ ॥**
**ಜ್ಞಾನಹಸ್ತಸ್ಯ ಕಿಂ ಲಿಂಗಂ ಕಿಂ ಲಿಂಗಂ ಭಾವಹಸ್ತಕಮ್ ।**
**ಇತಿ ಭೇದಂ ನ ಜಾನಾಮಿ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಚಿತ್ತವು ಆವ ಲಿಂಗವ ಧರಿಸಿ ಇಹುದು, ಬುದ್ಧಿಯು ಆವ ಲಿಂಗವ ಧರಿಸಿ ಇಹುದು. ಅಹಂಕಾರವು ಆವ ಲಿಂಗವ ಧರಿಸಿ ಇಹುದು, ಮನಸು ಆವ ಲಿಂಗವ ಧರಿಸಿ ಇಹುದು, ಜ್ಞಾನಹಸ್ತವು ಆವ ಲಿಂಗವ ಧರಿಸಿ ಇಹುದು, ಭಾವಹಸ್ತವು ಆವ ಲಿಂಗವ ಧರಿಸಿ ಇಹುದು, ಈ ಭೇದವನರಿಯೆನು ಎಲೆ ಪರಮೇಶ್ವರನೆ ಹೇಳು ಎಂದಳು ಪಾರ್ವತಿ. ॥೨೩೦-೨೩೧॥

**ಈಶ್ವರೋವಾಚ :**

**ಚಿತ್ತಸ್ಯಾಚಾರಲಿಂಗಂ ಚ ಗುರುಲಿಂಗಂ ಸುಬುದ್ಧಿನಃ ।**
**ಶಿವಲಿಂಗಾತ್ವಹಂಕಾರಃ ಮನೋಹಸ್ತೇನ ಜಂಗಮಮ್ ॥**
**ಪ್ರಸಾದಂ ಜ್ಞಾನಹಸ್ತಸ್ಯ ಮಹಾಲಿಂಗಸ್ಯ ಭಾವಕಮ್ ।**
**ಏತೇ ಗುಹ್ಯತರಂ ಚೈವ ಸುಸೂಕ್ಷ್ಮಂ ಶ್ರುಣು ಪಾರ್ವತಿ ॥**

ಟೀಕು: ಚಿತ್ತವು ಆಚಾರಲಿಂಗವನು ಧರಿಸಿ ಇಹುದು, ಬುದ್ಧಿಯು ಗುರುಲಿಂಗವ ಧರಿಸಿ ಇಹುದು, ಅಹಂಕಾರವು ಶಿವಲಿಂಗವ ಧರಿಸಿ ಇಹುದು, ಮನಸ್ಸು ಜಂಗಮ ಲಿಂಗವ ಧರಿಸಿ ಇಹುದು, ಜ್ಞಾನಹಸ್ತವು ಪ್ರಸಾದಲಿಂಗವ ಧರಿಸಿ ಇಹುದು, ಭಾವವು ಮಹಾಲಿಂಗವ ಧರಿಸಿ ಇಹುದು. ಇದು ಅತ್ಯಂತ ಗೋಪ್ಯವು, ಸೂಕ್ಷ್ಮವು ಕೇಳಾ ಪಾರ್ವತಿ ಎಂದು ಶಿವನು ಹೇಳಿದನು. ॥೨೩೨-೨೩೩॥

**ದೇವ್ಯೋವಾಚ:**

**ಕಿಂ ಮಿಶ್ರಂ ಚಿತ್ತಬುದ್ಧೀ ಚ ಕಿಮಹಂಕಾರಂ ಮನಸಾ ।**
**ಕಿಂ ಮಿಶ್ರಂ ಜ್ಞಾನಭಾವಂ ಚ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಚಿತ್ತ ಬುದ್ಧಿಗಳು ಏನು ಮಿಶ್ರವಾಗಿಹುವು, ಅಹಂಕಾರ ಮನಸುಗಳು ಏನು ಮಿಶ್ರವಾಗಿಹುವು, ಜ್ಞಾನ ಭಾವಂಗಳು ಏನು ಮಿಶ್ರವಾಗಿಹುವು, ಎಲೆ ಪರಮೇಶ್ವರನೆ ಹೇಳು ಎಂದಳು. ॥೨೩೪॥

**ಈಶ್ವರ ಉವಾಚ:**

**ಭಾವಃ ಪಂಚಸಮಾಯುಕ್ತೋ ಜ್ಞಾನಃ ಪಂಚಸಮನ್ವಿತಮ್ ।**
**ಮನಃ ಪಂಚಸಮಾಯುಕ್ತೋ ಅಹಂಕಾರಸ್ತಥೈವ ಚ ॥**
**ಬುದ್ಧಿಃ ಪಂಚಸಮಾಯುಕ್ತೋ ಚಿತ್ತಂ ಪಂಚಸಮನ್ವಿತಮ್ ।**
**ಏವಂ ಪಂಚಸಮಾಯುಕ್ತೋ ಸುಸೂಕ್ಷ್ಮಂ ಕಮಲಾನನೇ ॥**

ಟೀಕು: ಭಾವವು ಐದನ್ನು ಕೂಡಿ ಇಹುದು, ಜ್ಞಾನವು ಐದನ್ನು ಕೂಡಿ ಇಹುದು, ಮನಸು ಐದನ್ನು ಕೂಡಿ ಇಹುದು, ಅಹಂಕಾರವು ಐದನ್ನು ಕೂಡಿ ಇಹುದು, ಬುದ್ಧಿಯು ಐದನ್ನು ಕೂಡಿ ಇಹುದು, ಚಿತ್ತವು ಐದನ್ನು ಕೂಡಿ ಇಹುದು. ಇವು ಒಂದೊಂದಕ್ಕೆ ಐದೈದು ಮಿಶ್ರವು ಕೇಳಾ ಪಾರ್ವತಿ ಎಂದು ಶಿವನು ಹೇಳಿದನು. ಹಸ್ತಮುಖಂಗಳು

ಮೊದಲಾಗಿ ಐದು ಪ್ರಕಾರದ ಮಿಶ್ರಂಗಳನು ಹಿಂದೆ ಹೇಳಿದ್ದೇವೆ. ॥೨೩೫-೨೩೬॥

**ದೇವ್ಯೋವಾಚ:**

**ಘ್ರಾಣೇನಾಚಾರಲಿಂಗಸ್ಯ ಗಂಧಂ ಗೃಹ್ಣಾತಿ ಯತ್ಸದಾ ।**
**ಜಿಹ್ವಾಯಾಂ ಗುರುಲಿಂಗಂ ತು ರಸಂ ಗೃಹ್ಣಾತಿ ಯತ್ಸದಾ ॥**
**ಚಕ್ಷುಷಾ ಶಿವಲಿಂಗಂ ಚ ರೂಪಂ ಗೃಹ್ಣಾತಿ ಯತ್ಸದಾ ।**
**ತ್ವಚಾಂ ಜಂಗಮಲಿಂಗಂ ಚ ಸ್ಪರ್ಶಮಾದಾಯ ಸಾದರಮ್ ॥**
**ಶ್ರೋತ್ರೇಣ ಶಬ್ದಂ ಗೃಹ್ಣಾತಿ ಪ್ರಸಾದಲಿಂಗಮೇವ ಚ ।**
**ಹೃದಿನಾ ಮಹಾಲಿಂಗಂ ಚ ಪರಿಣಾಮಂ ಪ್ರಯಚ್ಛತಿ ॥**

ಟೀಕು: ಆಚಾರಲಿಂಗವು ನಾಸಿಕದಿಂದ ಗಂಧವನು ಗ್ರಹಿಸೂದು, ಗುರುಲಿಂಗವು ಜಿಹ್ವೆಯಲ್ಲಿ ರಸವನು ಗ್ರಹಿಸೂದು, ಶಿವಲಿಂಗವು ನಯನದಿಂದ ರೂಪನು ಗ್ರಹಿಸೂದು, ಜಂಗಮಲಿಂಗವು ತ್ವಕ್ಕಿನಿಂದ ಸ್ಪರ್ಶನವನು ಗ್ರಹಿಸೂದು, ಪ್ರಸಾದಲಿಂಗವು ಶ್ರೋತ್ರದಿಂದ ಶಬ್ದವನು ಗ್ರಹಿಸೂದು, ಮಹಾಲಿಂಗವು ಮನಸ್ಸಿನಿಂದ ಪರಿಣಾಮವನು ಗ್ರಹಿಸೂದು. ॥೨೩೮-೨೩೯-೨೪೦॥

**ಇತ್ಯೇವಮಿಂದ್ರಿಯೇಣೈವ ಮಹಾಲಿಂಗ ಸುಬುದ್ಧಿಮಾನ್ ।**
**ಗಂಧಾದ್ಯಾದಿನಾಂ ಪರ್ಯಂತಮನುಯಚ್ಛತಿ ಸರ್ವದಾ ॥**

ಟೀಕು: ಈ ಪ್ರಕಾರದಲ್ಲಿ ಮಹಾಲಿಂಗವು ಆರು ಪ್ರಕಾರದ ಲಿಂಗ ರೂಪವ ಕೈಕೊಂಡು ಗಂಧ ಮೊದಲಾಗಿ ಪರಿಣಾಮವೇ ಕಡೆಯದಂಥಾ ಭೋಗಂಗಳನು ಇಂದ್ರಿಯಗಳಿಂದ ಭೋಗಿಸುತ್ತಿಹುದು. ॥೨೪೧॥

**ಇತಿ ಬುದ್ಧ್ಯಾ ತಥಾ ಚೈವ ಸಹಭಾಜನ ಉಚ್ಯತೇ ।**

ಟೀಕು: ಈ ಪ್ರಕಾರದಲ್ಲಿ ಲಿಂಗವೇ ಭೋಗಿಸುತ್ತಿಹುದೆಂದು ಬುದ್ಧಿಯಿಂದರಿದು ಆಚರಿಸಲಾಗಿ ಸಹಭಾಜನವೆಂದೇ ಹೇಳಲ್ಪಟ್ಟಿತ್ತು. ॥೧೪೨॥

**ಲಿಂಗದೃಷ್ಟಿ ನಿರೀಕ್ಷಸ್ಯ ಲಿಂಗಹಸ್ತೋऽ ಪಿ ಸ್ಪರ್ಶನಮ್ ।**
**ಲಿಂಗಸ್ತೋತ್ರಂ ಚ ಶ್ರುತವಾನ್ ಲಿಂಗಜಿಹ್ವಾರಸನ್ನವಾನ್ ॥**

ಟೀಕು: ನೋಡೂದು ಲಿಂಗದ ನಯನ, ಸ್ಪರ್ಶನವ ಮಾಡೂದು ಲಿಂಗದ ಹಸ್ತ, ಕೇಳುವುದು ಲಿಂಗದ ಶ್ರೋತ್ರ, ರಸವನಾಸ್ವಾದಿಸುವುದು ಲಿಂಗದ ಜಿಹ್ವೆ ಎಂದು ಅರಿಯುವುದು. ॥೨೪೩॥

**ಲಿಂಗಘ್ರಾಣಂ ತು ಘ್ರಾಣಾ ಚ ಲಿಂಗಸ್ಯ ವದತೇ ಸಹ ।**
**ಲಿಂಗಂ ಮನನತೋ ವಾಪಿ ಇತ್ಯೇತೇ ಸಹಭಾಜನಮ್ ॥**

ಟೀಕು: ವಾಸನೆಯ ಕೊಂಬುದು ಲಿಂಗನಾಸಿಕವು, ನುಡಿವುದು ಲಿಂಗವು ತಾನೆ. ಮನಸ ಬೆರಸಿದುದು ಲಿಂಗ, ಹೀಗೆಂಬ ಭಾವನೆಯೇ ಸಹಭಾಜನವೆಂದು ಹೇಳಲ್ಪಟ್ಟಿತ್ತು. ॥೨೪೪॥

**ದೃಷ್ಟ್ವಾ ದೃಷಂ ಶ್ರುತಂ ಶ್ರುತ್ಯಾಃ ಘ್ರಾಣಾಘ್ರಾಣಂ ಸ ಏವ ಚ ।**
**ಸ್ಪರ್ಶನಾತ್ಸ್ಪರ್ಶನಂ ವಿಂದ್ಯಾತ್ ಗ್ರಾಹ್ಯಂ ತದ್ಗ್ರಾಹ್ಯಮೇವ ಚ ॥**
**ಭುಕ್ತಾ ತದ್ಭುಕ್ತಮಾಖ್ಯಾತಂ ತೃಪ್ತಾತೃಪ್ತಿಶ್ಚ ಏವ ಚ ।**
**ಏಕೈಕಂ ಪ್ರಾಣಾಮಾಖ್ಯಾತಮಿತ್ಯೇತೇ ಸಹವರ್ತಿನಾಮ್ ॥**

ಟೀಕು: ದೃಷ್ಟಿಯಿಂದ ಕಂಡುದು, ಕಿವಿಯಿಂದ ಕೇಳ್ದುದು, ನಾಸಿಕದಿಂದ ಆಘ್ರಾನಿಸಿದುದು, ಸ್ಪರ್ಶನದಿಂದ ಮುಟ್ಟಿದುದು, ಗ್ರಾಹ್ಯದಿಂದ ಗ್ರಹಿಸಿದುದು, ಜಿಹ್ವೆಯಿಂದ ಭುಂಜಿಸುದುದು, ತೃಪ್ತಿಯಿಂದ ಪರಿಣಾಮಿಸಿದುದು ಲಿಂಗವೆಂಬ ಭಾವವು, ಸಹವರ್ತಿ ಎನಿಸೂದು, ಇದು ಒಂದಕ್ಕೊಂದು ಪ್ರಾಣವು. ॥೨೪೫-೨೪೬॥

**ಹೃದಯಂ ಹೃದಯಸ್ಯೈವ ಶ್ರೋತ್ರಂ ಶ್ರೋತ್ರಸ್ಯ ಸರ್ವದಾ ।**
**ಸ್ಪರ್ಶನಾತ್ ಸ್ಪರ್ಶನಂ ಚೈವ ದೃಷ್ಟಾದೃಷ್ಟಂ ತಥೈವ ಚ ॥**
**ಜಿಹ್ವಾಯಾಃ ಜಿಹ್ವಯಾ ಚೈವ ಘ್ರಾಣೇನ ಘ್ರಾಣಮೇವ ಚ ।**
**ಏಕೈಕಂ ಪ್ರಾಣಮಾಖ್ಯಾತಂ ಇತ್ಯೇತೇ ಸಹವರ್ತಿನಾ ॥**

ಟೀಕು: ತನ್ನ ಹೃದಯಕ್ಕೆ ಲಿಂಗದ ಹೃದಯವು, ತನ್ನಶ್ರೋತ್ರಕ್ಕೆ ಲಿಂಗದ ಶ್ರೋತ್ರವು, ತನ್ನ ಸ್ಪರ್ಶನಕ್ಕೆ ಲಿಂಗದ ಸ್ಪರ್ಶನವು, ತನ್ನ ದೃಷ್ಟಿಗೆ ಲಿಂಗದ ದೃಷ್ಟಿಯು, ತನ್ನ ಜಿಹ್ವೆಗೆ ಲಿಂಗದ ಜಿಹ್ವೆಯು, ತನ್ನ ನಾಸಿಕಕ್ಕೆ ಲಿಂಗದ ನಾಸಿಕವು, ಆಶ್ರಯವೆಂಬ ಭಾವವು ಸಹವರ್ತಿಯೆನಿಸೂದು, ಇವು ಒಂದಕ್ಕೊಂದು ಪ್ರಾಣವು ಎಂದು ಈಶ್ವರನು ನಿರೂಪಿಸಿದನು. ॥೨೪೭-೨೪೮॥

**ಲಿಂಗದೇಹಿ ಶಿವಾತ್ಮಾಯಂ ಲಿಂಗಾಚಾರೇಣ ಲೌಕಿಕಮ್ ।**
**ಸರ್ವಂ ಲಿಂಗಮಯಂ ರೂಪಂ ಲಿಂಗೇನ ಸಹ ಮಶ್ನುತೇ ॥**

ಟೀಕು: ಲಿಂಗಪ್ರಾಣಿಯು ಶಿವ ಸ್ವರೂಪನು, ಲಿಂಗ ಆಚಾರದಲ್ಲಿ ನಡವನು, ಲೋಕ ಸರ್ವಕನಲ್ಲ, ಸಮಸ್ತವೂ ಲಿಂಗದ ರೂಪು, ಲಿಂಗದೊಡನೆ ಭುಂಜಿಸುತ್ತಿಹನು, ಶಿವಸ್ಮರಣೆಯಿಂದ ಭುಂಜಿಸುವನೆಂಬುದರ್ಥವು. ॥೨೪೯॥

**ಇತಿ ಭೇದಂ ನ ಜಾನಾತಿ ಪ್ರಸಾದಂ ನಿಷ್ಫಲಂ ಭವೇತ್ ।**

ಟೀಕು: ಈ ಭೇದವನು ಅರಿಯದೆ ಇದ್ದರೆ ಪ್ರಸಾದವು ನಿಷ್ಫಲವು. ॥೨೫೦॥

**ದೇವ್ಯೋವಾಚ:**

**ಜೀವೋ ದೇಹಂ ಪರಿತ್ಯಕ್ತ್ವಾ ಕಸ್ಮಿನ್ ಲಿಂಗೇ ಪ್ರಲೀಯತೇ ।**
**ಲಿಂಗಸ್ಯ ಷಡ್ವಿಧಂ ಪ್ರೋಕ್ತಂ ಬ್ರೂಹಿ ಮೇ ಪರಮೇಶ್ವರ ॥**

ಟೀಕು: ಷಡ್ವಿಧ ಲಿಂಗವು ವಿವರವಾಗಿ ಹೇಳಲ್ಪಟ್ಟಿತ್ತು. ಜೀವನು ದೇಹವನು ಬಿಟ್ಟು ಆವ ಲಿಂಗದಲ್ಲಿ ಅಡಗುವನು ಎಂಬುದನ್ನು ಹೇಳು ಪರಮೇಶ್ವರನಿಗೆ ಎಂದ ಪಾರ್ವತಿಯು ಬೆಸಗೊಂಡಳು. ॥೨೫೧॥

**ಈಶ್ವರೋವಾಚ :**

**ಪಂಚೇಂದ್ರಿಯಮುಖಂ ಜ್ಞಾತ್ವಾ ಪದಾರ್ಥಂ ಚ ಸಮರ್ಪಿತಮ್ ।**
**ಯಲ್ಲಿಂಗಂ ಮನುತೇ ಯಸ್ತು ತಸ್ಮಿನ್ ಲಿಂಗೇ ಪ್ರಲೀಯತೇ ॥**

ಟೀಕು: ಪಂಚೇಂದ್ರಿಯಂಗಳ ಮುಖವನರಿದು, ಅವುದಾನೊಂದು ಲಿಂಗವು ಪದಾರ್ಥವಾಗಿ ಇಂದ್ರಿಯಂಗಳ ಸಮರ್ಪಿಸಿಕೊಂಡಿತ್ತು. ಆ ಲಿಂಗದಲ್ಲಿ ಜೀವನು ಬೆರಸುವನು ಎಂದು ಈಶ್ವರನು ಹೇಳಿದನು. ॥೨೫೨॥

**ಯಥಾ ತತ್ತ್ವಂ ತಥಾ ದೃಷ್ಟಿರ್ಯಥಾ ದೃಷ್ಟಿಸ್ತಥಾ ಮನಃ ।**
**ಯಥಾ ಮನಸ್ತಥಾ ಭಾವೋ ಯಥಾ ಭಾವಸ್ತಥಾ ಲಯಃ ॥**

ಟೀಕು: ಹೇಗೆ ತತ್ವವೋ ಹಾಗೆ ದೃಷ್ಟಿಯು, ಹೇಗೆ ದೃಷ್ಟಿಯೋ ಹಾಗೆ ಮನಸ್ಸು, ಹೇಗೆ ಮನಸೋ ಹಾಗೆ ಭಾವವು, ಹೇಗೆ ಭಾವವೋ ಹಾಗೆ ಲಯವು (ವಿಲಯವೆಂದರೆ ಭಕ್ತಿ). ॥೨೫೩॥

**ಅರ್ಪಿತಾನರ್ಪಿತೋ ನಾಸ್ತಿ ಇತಿ ಭೇದಸಮರ್ಪಿತಮ್ ।**
**ಪದಾರ್ಥಂ ಚ ಪ್ರಸಾದಂ ಚ ಹ್ಯೇತದ್ಗುಣಂ ನ ಭಾವಯೇತ್ ॥**

ಟೀಕು: ತತ್ವದಲ್ಲಿ ವಿಶ್ರಾಂತಿಯಾದ ಲಯವನೆಯ್ದಿದಾತಂಗೆ ಅರ್ಪಿತ ಅನರ್ಪಿತವೆಂಬ ಭಾವವಿಲ್ಲದೆ ಸಮರ್ಪಿಸಲ್ಪಟ್ಟಿತ್ತು. ಬಳಿಕ ಪದಾರ್ಥವು ಪ್ರಸಾದವೆಂಬ ಗುಣದಿಂದ ಭಾವಿಸಲ್ಪಡುವುದು. ॥೨೫೪॥

**ಅಭಾವೇ ಭಾವಮಾಸಾದ್ಯ ಹ್ಯಸ್ಥಾನೇ ಸ್ಥಾನಮಾಚರೇತ್ ।**
**ಯೇ ತದ್ವಯ ಪರಿಜ್ಞಾನಿ ಪ್ರಸಾದಿ ಸಾವಧಾನಿತಃ ॥**

ಟೀಕು: ಭಾವವಿಲ್ಲದಲ್ಲಿ ಭಾವವನು ಮಾಡಿ ಸ್ಥಲವಿಲ್ಲದೇ ಇದ್ದಲ್ಲಿ ಸ್ಥಲವನು ಆಚರಿಸೂದು, ಈ ಎರಡರ ಭೇದವನು ಬಲ್ಲಾತನು ಸಾವಧಾನಿ ಪ್ರಸಾದಿ ಎನಿಸಿಕೊಂಬನು. ॥೨೫೫॥

**ಸಂಯೋಗೇ ಚ ವಿಯೋಗೇ ಚ ಅಣುಬಿಂದುಸುಖಾರ್ಪಿತಮ್ ।**
**ಯಃ ಕುರ್ಯಾದಿಷ್ಟಲಿಂಗಾತ್ತು ಸಾವಧಾನಿ ನಿರಂತರಮ್ ॥**

ಟೀಕು: ಅವನಾನೊಬ್ಬನು ಸಂಯೋಗ ವಿಯೋಗಂಗಳಲ್ಲಿ ಅಣುಬಿಂದು ಮಾತ್ರವನ್ನಾದರೂ ತನ್ನ ಇಷ್ಟಲಿಂಗದಲ್ಲಿ ಸುಖಾರ್ಪಿತವನು ಮಾಡುತ್ತಿದ್ದಾನು, ಆತನು ಸಾವಧಾನಿ ಪ್ರಸಾದಿ. ॥೨೫೬॥

**ಪ್ರಾಣಪ್ರಯಾಣಕಾಲೇ ಚ ಲಿಂಗಭೋಗೋಪಭೋಗಿನಃ ।**
**ಅರ್ಪಿತಂ ಸಾವಧಾನೇನ ಸ ಲಿಂಗೀ ಪ್ರಾಣನಾಯಕಃ ॥**

ಟೀಕು: ಲಿಂಗವು ಭೋಗಿಸಿದ ಭೋಗವ ಕೊಂಬಂಥ ಲಿಂಗಪ್ರಾಣಿಯ ಪ್ರಾಣವು ಹೋಹಕಾಲದಲ್ಲಿ ಸಾವಧಾನವಾಗಿ ಪ್ರಾಣವಂ ಸಮರ್ಪಣವಂ ಮಾಡೂದು. ॥೨೫೭॥

**ಲಿಂಗಾರ್ಪಿತತನುಃ ಪ್ರಾಣಾರ್ಪಿತಂ ಚ ಪೃಥಕ್ ಪೃಥಕ್ ।**
**ಅರ್ಪಿತಂ ಮುಖಸಂವೇದಿ ಮುಖಮಪ್ಯಾ ಸಮರ್ಪಿತಮ್ ॥**

ಟೀಕು: ಶರೀರವು ಪ್ರಾಣವು ಬೇರೆ ಬೇರೆ ಲಿಂಗಕ್ಕೆ ಸಮರ್ಪಣವಾಯಿತ್ತಾಗಿ ಸುಖಂಗಳನರಿದು ಅರ್ಪಿಸೂದು. ॥೨೫೮॥

**ನ ಕಾಲಂ ಪ್ರಾಣಲಿಂಗೀ ಚ ನ ಕರ್ಮೋ ಲಿಂಗಪ್ರಾಣಿನಾಮ್ ।**
**ಕಲ್ಪಿತಂ ಚ ದ್ವಯೋರ್ನಾಸ್ತಿ ಶರಣಸ್ಯೋಪಸಂಸ್ಮೃತಃ ॥**

ಟೀಕು: ಆ ಪ್ರಾಣಲಿಂಗಿಗೆ ಕಾಲವಿಲ್ಲ, ಲಿಂಗಪ್ರಾಣಿಗೆ ಕರ್ಮವಿಲ್ಲ, ಈ ಎರಡರ ಕಲ್ಪಿತವು ನಾಸ್ತಿಯಾಗಿಹನೆಂದು ಶರಣರಿಂದ ನೆನೆಯಲ್ಪಟ್ಟನು. ॥೨೫೯॥

**ಸಲಿಂಗಿ ಪ್ರಾಣಮುಕ್ತಶ್ಚ ಮನೋಮುಕ್ತಶ್ಚ ಜಂಗಮಃ ।**
**ಪ್ರಸಾದಿ ಕಾಯಮುಕ್ತಶ್ಚ ತ್ರಿವಿಧಂ ತತ್ವನಿರ್ಣಯಮ್ ॥**

ಟೀಕು: ಆ ಪ್ರಾಣಲಿಂಗಿಗೆ ಪ್ರಾಣದ ಹಂಗಿಲ್ಲ. ಜಂಗಮವು ಮನೋಮುಕ್ತವು, ಪ್ರಸಾದಿಯು ಶರೀರಮುಕ್ತನು. ಈ ಮೂರೂ ತತ್ವನಿರ್ಣಯವೆಂದು ಹೇಳಲ್ಪಟ್ಟಿತ್ತು. ॥೨೬೦॥

**ಲೋಕಾಚಾರ ನ ಬದ್ಧಂ ಚ ಲೋಕಾಲೋಕವಿವರ್ಜಿತಃ ।**
**ಲೋಕಾಚಾರಪರಿಚ್ಛೇದ್ಯಂ ಪ್ರಾಣಲಿಂಗೀ ತು ಸಂಸ್ಮೃತಃ ॥**

ಟೀಕು: ಪ್ರಾಣಲಿಂಗಿಯು ಲೋಕದ ಆಚಾರದಲ್ಲಿ ಸಂಬಂಧಿಸುವವನಲ್ಲ, ಲೋಕಾ ಲೋಕ ವಿವರ್ಜಿತನಹಂಥಹನು, ಲೋಕದ ಮಾರ್ಗವ ಭೇದಿಸುವಂತಹನು ಎಂದು ಹೇಳಲ್ಪಟ್ಟಿತ್ತು. ॥೨೬೧॥

**ನಾಹಂ ವಸಾಮಿ ಕೈಲಾಸೇ ನ ಮೇರೌ ನ ಚ ಮಂದರೇ ।**
**ಮದ್ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತಿ ॥**

ಟೀಕು: ಎಲೈ ಪಾರ್ವತಿಯೇ, ನಾನು ಕೈಲಾಸದಲ್ಲಿಯೂ ಇರುವುದಿಲ್ಲ, ಮೇರು ಪರ್ವತದಲ್ಲಿಯೂ ಇರುವುದಿಲ್ಲ, ಪಂದರ ಪರ್ವತದಲ್ಲಿಯೂ ಇರೆನು, ನನ್ನ ಭಕ್ತರುಗಳು ಎಲ್ಲಿ ಇರುತ್ತಿಹರೋ ಅಲ್ಲೇ ನಾನು ಇಹನು ಎಂದು ಪಾರ್ವತಿಗೆ ಹೇಳಿದನು. ॥೨೬೨॥

**ಸದ್ಭಾವಂ ಸದ್ಗುಣಂ ಚೈವ ಸದ್ಧರ್ಮಂ ಸಾವಧಾನಕಮ್ ।**
**ಸತ್ಸಂಗಸ್ತು ಸಂವೇದ್ಯಂ ಚ ತತ್ರ ತಿಷ್ಠಾಮಿ ಪಾರ್ವತಿ ॥**

ಟೀಕು: ಸದ್ಭಾವವು, ಸದ್ಗುಣವು, ಸದ್ಧರ್ಮವು ಸಾವಧಾನವು ಸತ್ಸಂಗವು ಅರಿವು ಎಲ್ಲಿಹುದೋ ಅಲ್ಲಿಯೇನಾಗಹೆನು ಎಂದು ಪಾರ್ವತಾದೇವಿಯರಿಗೆ ಈಶ್ವರನು ಹೇಳಿದನು. ॥೨೬೩॥

**ಸದ್ಭಕ್ತಿಶ್ಚ ಸದಾಚಾರಃ ಸದ್ಗೋಷ್ಠೀ ಚ ಸದಾ ಶುಚಿಃ ।**
**ಸಮ್ಯಜ್ಞಾನಂ ಸದಾನಂದಂ ತತ್ರ ತಿಷ್ಠಾಮಿ ಪಾರ್ವತಿ ॥**

ಟೀಕು: ಸದ್ಭಕ್ತಿಯೂ, ಸದಾಚಾರವೂ, ಸದ್ಗೋಷ್ಠಿಯೂ, ಶುಚಿತ್ವವೂ, ಸಮ್ಯಜ್ಞಾನವೂ, ಸದಾನಂದವೂ ಎಲ್ಲಿಹುದೋ ಅಲ್ಲಿ ನಾನಿಹೆನು ಪಾರ್ವತಿ ಎಂದು ಶಿವನು ಹೇಳಿದನು. ॥೨೬೪॥

**ಸದ್ಯೋಜಾತಸ್ತಥಾ ಭೂಮಿ ವಾಮದೇವಸ್ತಥಾ ಜಲಮ್ ।**
**ಅಘೋರಮಗ್ನಿರಿತ್ಯುಕ್ತಂ ತತ್ಪುರುಷಂ ವಾಯುರುಚ್ಯತೇ ।**
**ಈಶಾನಂ ಗಗನಾಕಾರಂ ಪಂಚಬ್ರಹ್ಮಮಯಂ ಜಗತ್ ॥**

ಟೀಕು: ಸದ್ಯೋಜಾತ ಮುಖವು ಪೃಥ್ವಿಯು, ವಾಮದೇವ ಮುಖವು ಅಪ್ಪುವು, ಅಘೋರ ಮುಖವು ಅಗ್ನಿಯು, ತತ್ಪುರುಷ ಮುಖವು ವಾಯುವು, ಈಶಾನ ಮುಖವು ಆಕಾಶವು, ಈ ಜಗತ್ತೆಲ್ಲವೂ ಪಂಚಬ್ರಹ್ಮಮಯವು ಎಂದು ಈಶ್ವರನು ಪಾರ್ವತಾದೇವಿಯರಿಗೆ ಹೇಳಿದನು. ॥೨೬೫॥

**ಇತ್ಯುಮಾಮಹೇಶ್ವರಸಂವಾದೇ ಷಡುಸ್ಥಲನಿರ್ಣಯಂ**
**ಪರಮರಹಸ್ಯಂ ಸಂಪೂರ್ಣಂ**

# ಅನುಬಂಧ

## ಶ್ಲೋಕಗಳ ಆಕಾರಾದಿ


| | |
|---|---|
| ಆಕಾರೋಕಾರ ಮಕಾರೋ | ೫೭ |
| ಅಖಂಡಮಂಡಲಾಕಾರಂ | ೮ |
| ಅಕ್ಷರಸ್ಯ ಕಥೋತ್ಪತ್ತಿಃ | ೪೯ |
| ಅಕ್ಷರಾದಿ ತವರ್ಗಾಂತಂ | ೫೩ |
| ಅಜ್ಞಾನತಿಮಿರಾಂಧಶ್ಚ | ೧೧ |
| ಅರ್ಥಪ್ರಾಣಾಭಿಮಾನಂ ಚ | ೯೭ |
| ಅನಂತಜನ್ಮಸಂಪ್ರಾಪ್ತ | ೧೩ |
| ಅನ್ಯಥಾ ವಿತ್ತಹೀನೋಪಿ | ೧೯ |
| ಅರ್ಪಿತಾನರ್ಪಿತೋ ನಾಸ್ತಿ | ೨೫೪ |
| ಅಭಾವೇ ಭಾವಮಾಸಾದ್ಯ | ೨೫೫ |
| ಅವಿಕಲ್ಪಮಿದಂ ಜ್ಞೇಯಂ | ೧೪೭ |
| ಅಶರೀರಂ ಗುರೋರ್ಭಾವ | ೨೫ |
| ಅಷ್ಟವಿಧಾರ್ಚನಂ | ೧೩೧ |
| ಅಹಂಕಾರಸ್ತಥೋಬುದ್ಧಿ | ೨೨೯ |
| ಅಂಗಮಾಚಾರಮಾಶ್ರಿತ್ಯ | ೧೦೧ |
| ಅಂಗುಷ್ಠಾಗ್ರೇ ಹ್ಯಷ್ಟಷಷ್ಠಿ | ೨೨ |
| ಅಂತರ್ಜ್ಞಾನಂ ಬಾಹ್ಯಕ್ರಿಯಾ | ೮೦ |
| ಆಚಾರಂ ಗುರುಲಿಂಗಂ ಚ | ೧೫೫ |
| ಆಚಾರಂ ಜ್ಞಾನಮಾಶ್ರಿತ್ಯ | ೧೯೩ |
| ಆಚಾರಮಪ್ಯನಾಚಾರಂ | ೧೧೫ |
| ಆಚಾರ ಲಿಂಗ ಗುರುಲಿಂಗ | ೮೭ |
| ಆಚಾರಸ್ಯ ಮುಖಂ ಕಿಂ | ೧೮೭ |
| ಆಚಾರಸ್ಯಾರ್ಪಿತಂ ಪೃಥ್ವಿ | ೧೯೭ |
| ಆತ್ಮಾಂಗೋ ಭಾವಹಸ್ತೇನ | ೨೨೫ |
| ಆಧಾರಸ್ಯ ನಕಾರಂ ಚ | ೬೩ |
| ಇತಿ ಬುದ್ಧ್ಯಾ ತಥಾ ಚೈವ | ೨೪೨ |
| ಇತಿ ಭೇದಂ ನ ಜಾನಾತಿ | ೨೫೦ |
| ಇತ್ಯೇವಮಿಂದ್ರಿಯೇಣ್ಯೈವ | ೨೪೧ |
| ಇಂದ್ರಿಯಾದಾಗತಂ | ೨೦೮ |
| ಇಷ್ಟಲಿಂಗಮುಖಂ ಪಂಚ | ೧೨೯ |
| ಇಷ್ಟಲಿಂಗಮುಖಂ ಕಿಂ | ೧೨೮ |
| ಇಷ್ಟಲಿಂಗಾರ್ಪಿತಂ ಅಂಗಂ | ೧೩೪ |
| ಇಷ್ಟಲಿಂಗಾರ್ಪಿತಂ ಕಿಂ | ೧೩೩ |
| ಇಷ್ಟಲಿಂಗೇ ಕಥಾ | ೧೩೦ |
| ಏಕಮೂರ್ತಿತ್ರಯೋಭಾಗಂ | ೨೮ |
| ಏಕಮೇಕಾಕ್ಷರಂ ಚೈವ | ೬೧ |
| ಏಕೈಕಂ ಮನುತೇ ಯಸ್ತು | ೧೫೨ |
| ಏತೇಷಾಂ ಷಟ್‍ಸ್ಥಲಾನಾಂ | ೧೮೦ |
| ಏವಂ ಭೇದಕಳಾದೇವಿ | ೭೦ |
| ಏವಂ ಲಿಂಗಮುಖಂ ಜ್ಞಾತ್ವಾ | ೧೨೬ |
| ಓಂಕಾರಂ ಪಂಚಭೂತಾತ್ಮಾ | ೧೬೮ |
| ಕಥಂ ಬುದ್ಧಿ ಸಮುತ್ಪನ್ನಂ | ೨೨೭ |
| ಕಥಮುತ್ಪದ್ಯತೇ ಭಾವಂ | ೨೨೬ |
| ಕಥಂ ಲಿಂಗಸ್ಥಲೇ ಚೈವ | ೬೫ |
| ಕರ್ಣದ್ವಾರಂ ಯಥಾ ವಾಕ್ಯಂ | ೭೨ |
| ಕರ್ಮಣಾ ಮನಸಾ ವಾಚಾ | ೧೭ |
| ಕಸ್ಮಿನ್ ಲಿಂಗಾರ್ಪಿತಂ | ೨೦೨ |
| ಕಾಮಕ್ರೋಧವಿನಿರ್ಮುಕ್ತಂ | ೧೦೨ |
| ಕಿಂಕುರ್ವಾಣ ಸಮಾಯುಕ್ತಂ | ೯೬ |
| ಕಿಂ ಭೇದಂ ಗುರುಲಿಂಗಂ ಚ | ೧೪೯ |
| ಕಿಂ ಭೇದಂ ತು ಮಹಾಲಿಂಗಂ | ೧೪೮ |
| ಕಿಂ ಭೇದಂ ನಾದರೂಪಂ ಚ | ೧೨೩ |
| ಕಿಂ ಮಿಶ್ರಂ ಚಿತ್ತಬುದ್ಧೀ ಚ | ೨೩೪ |
| ಕಿ ಮಿಶ್ರಂ ತು ಯಥಾ | ೧೭೩ |
| ಕಿಂ ಮಿಶ್ರಂ ತು ಯಥಾರೂಪಂ | ೨೧೯ |
| ಕಿಂ ಮಿಶ್ರಂ ತು ಶರಣ್ಯಶ್ಚ | ೧೭೪ |
| ಕಿಂ ಮಿಶ್ರಂ ತು ಸದಾಚಾರಂ | ೧೫೭ |
| ಕಿಂ ಮಿಶ್ರಂ ಸ್ಪರ್ಶನಂ ಚೈವ | ೨೧೦ |
| ಕಿಂ ಲಿಂಗಂ ತು ಶರಣ್ಯಂ ಚ | ೧೮೪ |
| ಕಿಂ ವಾ ವಸ್ತು ಯಥಾಜಾತಂ | ೬೬ |
| ಕೈಲಾಸಶಿಖರೇ | ೧ |
| ಗರ್ವಾಂ ಸರ್ಪಿಶರೀರಸ್ಥಂ | ೪೮ |
| ಗುರುದೀಕ್ಷಾ ಪತಿಪತ್ನ್ಯೋ | ೩೭ |
| ಗುರುದೇವೋ ಮಹಾದೇವೋ | ೧೦ |

ಗುರುದೇವಂ ಮಹಾದೇವಂ ೨೯
ಗುರುರ್ಮಾತಾ ಗುರುಃಪಿತಾ ೧೮
ಗುರುರೂಪಂ ತು ಯೋ ೨೬
ಗುರುರೇಕೋ ಭವೇಲ್ಲಿಂಗಂ ೩೯
ಗುರುಲಿಂಗಂ ಚರಲಿಂಗಂ ೧೯೦
ಗುರುಲಿಂಗಂ ಯಥಾ ಚೈವ ೧೫೧
ಗುರೋರಾಚಾರಲಿಂಗಂ ಚ ೧೫೯
ಗುರುಲಿಂಗೇ ತಥಾಚಾರ ೧೪೧
ಗುರುಸಾಹಿತ್ಯಭಕ್ತಾನಾಂ ೩೦
ಗಂಧೇ ಪಂಚಸಮಾಯುಕ್ತಂ ೨೧೨
ಘಟಮಧ್ಯಸ್ಥಿತಂ ೭೯
ಘ್ರಾಣಮಾಚಾರಲಿಂಗಸ್ಯ ೨೦೬
ಘ್ರಾಣೇನಾಚಾರಲಿಂಗಸ್ಯ ೨೩೮
ಘ್ರಾಣೇಂದ್ರಿಯ ಸಮಾಯುಕ್ತ ೨೧೬
ಚಕ್ಷುಷಾ ಶಿವಲಿಂಗಂ ಚ ೨೫೯
ಚಿತ್ತಂ ಕಿಂ ಲಿಂಗಧಾರಿ ಚ ೨೩೦
ಚಿತ್ತಸ್ಯಾಚಾರಲಿಂಗಂ ಚ ೨೩೨
ಚಿತ್ತಹಸ್ತೇನ ಭೂಮ್ಯಾಂಗೋ ೨೨೦
ಚೈತನ್ಯಂ ಶಾಶ್ವತಂ ಶಾಂತಂ ೪
ಜಿಹ್ವಾಯಃ ಜಿಹ್ವಯಾ ೨೪೮
ಜಿಹ್ವೇಂದ್ರಿಯಮುಖಂ ೨೧೯
ಜೀವೋ ದೇಹಂ ಪರಿತ್ಯಕ್ತ್ವಾ ೨೫೧
ಜಂಗಮಸ್ಯ ಕಥಂ ಬೀಜಂ ೧೬೧
ಜಂಗಮಂ ಶಿವಾಮಾಚಾರಂ ೧೯೫
ಜಂಗಮಲಿಂಗಮಾಚಾರ ೧೯೧
ಜಂಗಮಂ ಲಿಂಗಮಾಖ್ಯಾತಂ ೧೦೪
ಜಂಗಮಂ ಅಂಗಸದ್ಭಾವಂ ೧೦೩
ಜಂಗಮಂ ಜ್ಞಾನಸ್ವರೂಪಂ ಚ ೧೦೦
ಜಂಗಮಸ್ಯ ಕಥಂ ರೂಪಂ ೯೯
ಜಂಗಮಸ್ಯಾಗಮೋ ನಾಸ್ತಿ ೧೧೬
ಜ್ವಲತ್ಕಾಲಾನಲಾಭಾಸಾ ೬೮
ಜ್ಞಾನಕಾಯಃ ಸಮಾಖ್ಯಾತಃ ೬೨
ಜ್ಞಾನಾಚಾರಂ ಗುರುಲಿಂಗಂ ೧೯೪
ಜ್ಞಾನಂ ಪ್ರಣವ ಬೀಜಂ ಚ ೧೬೨
ಜ್ಞಾನ ಬೀಜಂ ಚ ಕಿಂ ವಾ ೧೬೦
ಜ್ಞಾನಲಿಂಗಂ ಮುಖಂ ಪಂಚ ೧೮೯
ಜ್ಞಾನಶಕ್ತಿ ಸಮಾರೂಢ ೭
ಜ್ಞಾನಹಸ್ತಸ್ಯ ಕಿಂ ಲಿಂಗಂ ೨೩೧
ಜ್ಞಾನಹಸ್ತೇನ ೨೨೪
ಜ್ಞಾನಹಸ್ತಂ ಶರಣಸ್ಯ ೧೮೨
ತಚ್ಛಿಷ್ಯ ಜ್ಞಾನಕ್ಷೇತ್ರಾದಿ ೫೧
ತತ್ಪ್ರಾಣೋ ಲಿಂಗದೇಹಶ್ಚ ೭೫
ತತ್ಪ್ರಸಾದಗತಂ ಪ್ರಾಣಂ ೧೪೪
ತಥಾ ಜಂಗಮಲೀಂಗೇ ಚ ೧೪೦
ತಥಾ ದೀಕ್ಷಾ ದ್ವಿಧಾ ಚೈವ ೪೧
ತಥಾ ಪ್ರಾಣೇ ಗುಣೇ ಲಿಂಗೇ ೧೭೦
ತಥಾಪಿ ಪ್ರಾಣಲಿಂಗಸ್ಯ ೭೮
ತದ್ದೇಹಮಿಂದ್ರಿಯೇಣ್ಯೈವ ೮೨
ತ್ವಗಿಂದ್ರಿಯ ಮುಖಂ ೨೧೮
ತ್ವದೀಯಂ ಪ್ರಣವಂ ೫೬
ದಗ್ಧಸ್ಯ ದಹನಂ ನಾಸ್ತಿ ೩೩
ದಾಸೋಹಂ ಭಾವಕಂ ಕಿಂ ೯೦
ದಾಂತಂ ಭಾಂತಂ ಚ ೫೪
ದಿವಾರಾತ್ರಂ ನ ಚ ೪೭
ದೀಕ್ಷಾಚ ಪತಿಪತ್ನ್ಯಾ ಚ ೩೬
ದೃಷ್ಟಾದೃಷ್ಟಂ ಶ್ರುತಂ ೨೪೫
ದೇಹಂ ನಾಸ್ತಿ ಕುಲಂ ನಾಸ್ತಿ ೧೧೧
ದ್ವಿತೀಯಂ ಪ್ರಣವಂ ೫೮
ಧ್ಯಾನಮೂಲೋ ಗುರೋರ್ಮೂರ್ತಿ ೨೧
ನ ಕಾಲಂ ಪ್ರಾಣಲಿಂಗೀ ಚ ೨೫೯
ನ ಗುರೋರಧಿಕಂ ೧೯
ನಕ್ಷತ್ರ ಗ್ರಹವೃಂದಾನಿ ೨೩
ನ ಕ್ರಿಯಾರಹಿತಂ ಜ್ಞಾನಂ ೮೨
ನ ಭವತ್ಪತಿಪತ್ನ್ಯೋಶ್ಚ ೪೦
ನಯನೇಂದ್ರಿಯಸಮುತ್ಪನ್ನಂ ೨೧೫
ನಾದನಿಷ್ಕಲಲಿಂಗಾನಾಂ ೧೨೨
ನಾದಬಿಂದುಕಳಾರೂಪ ೧೨೫
ನಾದಂ ಗುರುಮುಖಂ ೧೨೪
ನಾಹಂ ವಸಾಮಿ ಕೈಲಾಸೇ ೨೬೨
ನಿಸ್ಸಂಗತ್ವಂ ನಿರಾಭಾರಂ ೧೦೭
ನಿರ್ಮಲಂ ನಿಷ್ಕಲಂ ೧೩೮
ನಿರಾಕಾರಂ ಸದಾಕಾರಂ ೧೨೧

ನಿಶ್ಶಬ್ದಂ ಸ್ಥಾವರಂ ಚೈವ ೧೦೬
ನಿಷ್ಕಲಂಕಂ ನಿರಪೇಕ್ಷಂ ೧೦೮
ನಿರಹಂಕಾರಹಸ್ತೇನ ೨೨೨
ಪತಿ ಪತ್ನ್ಯಾಚ ಪುತ್ರಾಶ್ಚ ೩೮
ಪತಿಪತ್ನಿಗುರೋರ್ಲಿಂಗಂ ೪೨
ಪತಿರ್ಲಿಂಗಂ ಸತೀ ಚಾಹಂ ೧೭೧
ಪತಿರೇವ ಗುರುಸ್ತ್ರೀಣಾಂ ೩೫
ಪರಸ್ತ್ರೀಯಾಂ ಪರಾರ್ಥಂ ಚ ೧೬೮
ಪಂಚಭೂತಾತ್ಮಕಂ ದೇಹಂ ೨೦೦
ಪಂಚಭೂತಮಯಂ ದೇಹಂ ೧೯೬
ಪಂಚವಿಷಯಾದಿಕಂ ಭೋಗಂ ೧೯೯
ಪಂಚಾಕ್ಷರಂ ಪಂಚವಕ್ತ್ರಂ ೧೧೪
ಪಂಚೇಂದ್ರಿಯಮುಖಂ ೨೫೨
ಪಂಚೇಂದ್ರಿಯಾರ್ಪಿತಂ ಲಿಂಗಂ ೨೧೩
ಪ್ರಕೃತಿಜ್ಞಾನಕಾಯಶ್ಚ ೪೬
ಪ್ರಣವೇನ ಸಮಾಯುಕ್ತಂ ೫೫
ಪ್ರಣಮ್ಯ ದಂಡನದ್ಭೂಮ್ಯಾಂ ೧೫
ಪ್ರಸಾದಮಿಶ್ರಿತಂ ಕಿಂ ವಾ ೧೫೮
ಪ್ರಸಾದಸ್ಯ ಮುಖಂ ಕಿಂ ೧೮೮
ಪ್ರಸಾದಂ ಚ ಮಹಾಲಿಂಗಂ ೧೫೬
ಪ್ರಸಾದಂ ಚ ಶರಣ್ಯಾನಾಂ ೧೮೬
ಪ್ರಸಾದಂ ಜಂಗಮಂ ಚೈವ ೧೯೨
ಪ್ರಸಾದಸ್ಯ ಮುಖಂ ಜ್ಞಾತ್ವಾ ೧೨೭
ಪ್ರಸಾದಂ ಜ್ಞಾನಹಸ್ತಸ್ಯ ೨೩೩
ಪ್ರಸಾದಾರ್ಪಿತಮಾಕಾಶಂ ೧೯೮
ಪ್ರಾಣಮಾಚಾರಲಿಂಗಸ್ಯ ೧೪೨
ಪ್ರಾಣಪ್ರಯಾಣಕಾಲೇ ಚ ೨೫೭
ಪ್ರಾಣೇನ ಲಿಂಗಂ ಸಂಯುಕ್ತಂ ೩೨
ಪ್ರಾಣಂ ಚ ಶಿವಲಿಂಗಸ್ಯ ೧೪೩
ಬಾಹ್ಯಾಂಗೇ ದೃಶ್ಯತೇ ೭೭
ಬೀಜಂ ದ್ವಿವಿಧರೂಪಂ ೫೨
ಬ್ರಹ್ಮವಿಷ್ಣುಶ್ಚ ರುದ್ರಶ್ಚ ೯
ಬುದ್ಧಿಂ ಪಂಚಸಮಾಯುಕ್ತೋ ೨೩೬
ಭಗವನ್ ಸರ್ವಧರ್ಮಜ್ಞ ೨
ಭಕ್ತಮಾರ್ಗಂ ಕಥಾ ಭೇದಂ ೯೩
ಭಕ್ತಮಾಹೇಶ್ವರಶ್ಚೈವ ೧೭೫
ಭಕ್ತಸ್ಯಾಚಾರಲಿಂಗಂ ಚ ೧೮೫
ಭಕ್ತಸ್ಯಾಗಂ ಕಿಮಾಖ್ಯಾತಂ ೧೭೬
ಭಕ್ತಸ್ಯಾಂಗಸ್ಥಲಂ ಪೃಥ್ವಿ ೧೭೮
ಭಕ್ತಸ್ತ್ರೀ ಭಕ್ತಗೃಹಂ ಚ ೧೧೮
ಭಕ್ತಸ್ಸುಚಿತ್ತ ಹಸ್ತಶ್ಚ ೧೮೧
ಭಕ್ತಾನಾಂ ಸುಖಗೋಷ್ಠಿ ೧೧೭
ಭೃತ್ಯಾಚಾರಸ್ಸದಾಚಾರಃ ೯೫
ಭಕ್ತೋ ದಾಸೋಹಂ ಭಾವಂ ಚ ೯೧
ಭಕ್ತೋ ಮಾಹೇಶ್ವರಶ್ಚೈವ ೮೬
ಭಕ್ತೋ ಮಾಹೇಶ್ವರಶ್ಚೈವ ೧೬೬
ಭಕ್ತೋ ಮಾಹೇಶ್ವರಶ್ಚೈವ ೧೬೫
ಭವಾರಣ್ಯ ಪ್ರವಿಷ್ಟಸ್ಯ ೧೨
ಭಾಲೇ ತ್ರಿಪುಂಡ್ರಕಂ ೪೮
ಭಾವಾದಿ ತ್ರಿಷು ಲಿಂಗೇಷು ೧೫೪
ಭಾವಃ ಪಂಚಸಮಾಯುಕ್ತೋ ೨೩೫
ಭುಕ್ತಾ ತದ್ಭುಕ್ತಮಾಖ್ಯಾತಂ ೨೪೬
ಮಜ್ಜನಂ ಚ ತ್ರಿಕಾಲೇಷು ೯೮
ಮನೋಹಸ್ತೇನ ೨೨೩
ಮನ್ನಾಥಸ್ತ್ರಿ ಜಗನ್ನಾಥಃ ೨೦
ಮನೋಲೀಯೋ ನಿರಂಜನಯ್ಯೋ ೧೩೨
ಮಹಾಲಿಂಗಮಿದಂ ದೇವಿ ೧೩೭
ಮಹಾಲಿಂಗಂ ಸಮಾಖ್ಯಾತಂ ೧೩೯
ಮಹಾಲಿಂಗಮಿದಂ ಜ್ಞೇಯಂ ೭೬
ಮಹಾಲಿಂಗಮಿದಂ ದೇವಿ ೧೫೦
ಮಹತಂ ಮನುತೇ ೪೪
ಮಾತಾ ನಾಸ್ತಿ ಪಿತಾ ನಾಸ್ತಿ ೧೧೦
ಮಾಹೇಶ್ವರೋ ಜಲಾಂಗಶ್ಚ ೨೨೧
ಮುಖೇ ಮಂತ್ರೇ
ಹೃದಿ ಧ್ಯಾನಂ ೧೦೫
ಮುಗ್ದತ್ವಂ ಮೂರ್ತಿಮತ್ತತ್ವಂ ೧೦೯
ಯಕಾರಂ ಚ ವಿಶುದ್ಧಿಸ್ಯಾ ೬೪
ಯಥಾ ಅಗ್ನಿಸ್ತಥಾ ಕಾಷ್ಠೆ ೬೭
ಯಥಾ ಅಗ್ನಿಸ್ತಥಾ ಭಾಸಾ ೧೪೫
ಯಥಾಕಳಾ ತಥಾ ಭಾವಂ ೭೧
ಯಥಾ ಕುಂಭೇ ಜಲಂ ೮೧
ಯಥಾ ಕ್ಷೇತ್ರಸ್ಯ ಬೀಜಸ್ಯ ೫೦

ಯಥಾ ತತ್ತ್ವ ತಥಾ ದೃಷ್ಟಿ ೨೫೩
ಯಥಾ ಪ್ರಕೃತಿಕಾಯಶ್ಚ ೪೩
ಯಥೇಂದ್ರಿಯಮುಖಾ ೨೦೭
ಯೋ ಗುರುಃ ಕಾಯರೂಪೇಣ ೨೭
ಯೋ ಗುರುರ್ಮೃತ ಭಾವೇನ ೩೧
ಯೋಗುರುಶ್ಚ ಶಿವಃ ೩
ರೂಪಾರೂಪ ಸಮಾಖ್ಯಾತಂ ೧೧೩
ಲಿಂಗಘ್ರಾಣಂ ತು ಘ್ರಾಣಾ ಚ ೨೪೪
ಲಿಂಗದೃಷ್ಟಿ ನಿರೀಕ್ಷಸ್ಯ ೨೪೩
ಲಿಂಗದೇಹಿ ಶಿವಾತ್ಮಾಯಾಂ ೨೪೯
ಲಿಂಗಭಕ್ತಿರಿತಿ ಖ್ಯಾತಾ ೭೩
ಲಿಂಗಾರ್ಚನಂ ತು ಯಃ ೧೪೬
ಲಿಂಗಾರ್ಪಿತಂ ನ ಕರ್ತವ್ಯಂ ೧೧೯
ಲಿಂಗಾರ್ಪಿತಪ್ರಸಾದಂ ಚ ೧೬೯
ಲಿಂಗಾರ್ಪಿತತನುಃ ೨೫೮
ಲೋಕಾಚಾರ ಪರಿಚ್ಛೇದ ಚ ೨೬೧
ವಕಾರಂ ಚ ಚರಂ ೧೬೩
ವಪುರೇವ ಸಮುತ್ಪನ್ನಂ ೭೪
ವರಾನನೇ ಗುರುಸ್ತಸ್ಮಾತ್ ೩೪
ವಸ್ತುನೋ ಭಾವಮುತ್ಪನ್ನಂ ೨೨೮
ವಾಚಾತೀತಾ ಮನೋತೀತಾ ೬೯
ಶಬ್ದಸ್ಪರ್ಶಶ್ಚ ರೂಪಶ್ಚ ೨೦೧
ಶಬ್ದೇ ಪಂಚಸಮಾಯುಕ್ತಂ ೨೧೧
ಶಬ್ದಂ ಪ್ರಸಾದಲಿಂಗಂ ಚ ೨೦೪
ಶರಣ್ಯಸ್ಯ ಕಿಮಂಗಂ ಚ ೧೭೭
ಶರಣಾಂಗಂಚ ಆಕಾಶಂ ೧೭೬
ಶಾಂತ್ಯೈವ ಭಸ್ಮಮುದ್ಧೂಲಂ ೧೧೨
ಶಿವಮಂತ್ರಾಕ್ಷರಂ ಬೀಜಂ ೪೫
ಶಿವಲಿಂಗಮಘೋರಂ ಚ ೧೫೩
ಶಿವಲಿಂಗಾರ್ಪಿತಂ ರೂಪಂ ೨೦೩
ಶೋಷಣಂ ಪಾಪಪಂಕಸ್ಯ ೧೪
ಶ್ರುಣು ದೇವಿ ಪ್ರವಕ್ಷ್ಯಾಮಿ ೧೩೬
ಶ್ರುತಂ ಪ್ರಸಾದಲಿಂಗೇ ಚ ೨೦೫
ಶ್ರೋತ್ರೇಣ ಶಬ್ದಂ ೨೪೦
ಶ್ರೋತ್ರೇಂದ್ರಿಯಸಮಾಯುಕ್ತಂ ೨೧೪
ಷಡಕ್ಷರಾಣಿ ಕ್ರಮಶಃ ೬೦
ಷಡಕ್ಷರಂ ಸಮಾಖ್ಯಾತಂ ೫೯
ಷಟ್‌ಸ್ಥಲಂ ಚ ಕಥಂ ೧೩೫
ಷಡೂರ್ಮಯಶ್ಚ ೧೭೨
ಸದಾಚಾರಃ ಶಿವೇಭಕ್ತಿ ೧೬೭
ಸದಾಚಾರ ಶಿವೇಭಕ್ತಿ ೯೪
ಸದ್ಭಕ್ತಿಶ್ಚ ಸದಾಚಾರಃ ೧೮೩
ಸದ್ಭಾವಂ ಸದ್ಗುಣಂ ೨೬೩
ಸದ್ಯೋಜಾತಸ್ತಥಾ ಭೂಮಿ ೨೬೫
ಸಪ್ತಸಾಗರಪರ್ಯಂತಂ ೨೪
ಸಲಿಂಗಿ ಪ್ರಾಣಮುಕ್ತಶ್ಚ ೨೬೦
ಸಹಭಾಜನಂ ಕಿಂ ೨೩೭
ಸ್ಥಾವರಾರ್ಪಿತನೈವೇದ್ಯಂ ೧೨೦
ಸ್ಥಾವರಂ ಜಂಗಮಾಧಾರಂ ೫
ಸ್ಥಾವರಂ ಜಂಗಮಂ ಚೈವ ೮೮
ಸ್ಥಾವರಂ ಜಂಗಮಂ ಚೈವ ೮೯
ಸ್ಥಾವರಂ ನಿರ್ಮಲಂ ಶಾಂತಂ ೬
ಸ್ಥಾವರಂ ಮಿಶ್ರಿತಂ ಕಿಂ ೮೫
ಸೋಹಂ ದಾಸೋಹಮಾಖ್ಯಾತಂ ೯೨
ಸಂಯೋಗೇ ಚ ವಿಯೋಗೇ ಚ ೨೫೬
ಹೃದಯಂ ಹೃದಯಸ್ಯೈವ ೨೪೭
ಹೃದೀಂದ್ರಿಯಮುಖಂ ೨೧೭